ವಿಶ್ವ ಕೊಂಕಣಿ ಸಾಹಿತ್ಯ-15

ಕೊಂಕಣಿ ಮೂಲ:
ಗೋಕುಲದಾಸ ಪ್ರಭು

# ಋತುಸಂಕ್ರಮಣ

ಮತ್ತು ಇತರ ಕಥೆಗಳು

ಅನುವಾದ
ಗೀತಾ ಶೆಣೈ



ಕೊಂಕಣಿ ಭಾಸ ಆನಿ ಸಂಸ್ಕೃತಿ ಪ್ರತಿಷ್ಠಾನ



*An inscription in Konkani at the foot of one of the largest monolithic statues in the world. The statue of Lord Gomateshwara was created around 983 A.D. by Chamundaraya, a Minister of the Ganga King, Rajamalla.*

ಶ್ರೀ ಗೋಕುಲದಾಸ ಪ್ರಭು ಅವರ

# ಋತು ಸಂಕ್ರಮಣ

## ಮತ್ತು

# ಇತರ ಕತೆಗಳು

ಅನುವಾದ

**ಡಾ. ಗೀತಾ ಶೆಣೈ**

ಪ್ರಕಾಶಕರು

ಕೊಂಕಣಿ ಭಾಸ್ ಆನಿ ಸಂಸ್ಕೃತಿ ಪ್ರತಿಷ್ಠಾನ

ವಿಶ್ವ ಕೊಂಕಣಿ ಕೇಂದ್ರ

ಕೊಂಕಣಿ ಗಾಂವ್, ಶಕ್ತಿನಗರ

ಮಂಗಳೂರು – 575016

VISHWA KONKANI SAHITYA- 15

**'RUTU SANKRAMANA MATTU ITHARA KATEGALU'**- a collection of Konkani Short Stories of Sri Gokuldas Prabhu, Translated into Kannada by Dr. Geetha Shenoy, 1903, 7th Main, E Block, Rajajinagar, Bangalore-560010.Mobile No.: 9945883537

First Edition : 2013



Publisher : Konkani Language and Cultural Foundation (R)
World Konkani Centre, Shaktinagar,
Managalore- 575016
Phone: 0824-2231877, 2231887

Pages : viii + 158

Price : ₹ 125/-

Printer : Sri Prema Sai Printers & Publishers
C-26, Industrial Estate
Yeyyadi, Mangalore - 575008

Cover Design : Raghu Apara

***This book is published with the financial grant from the Kannada And Cultural Department, Government of Karnataka***

ISBN No : 978-83-82582-03-8

# ಪ್ರಕಾಶಕರ ಮಾತು

"ವಿಶ್ವ ಕೊಂಕಣಿ ಕೇಂದ್ರ"ದ ವತಿಯಿಂದ ನಡೆಯುತ್ತಿರುವ ಕೊಂಕಣಿ ಸಾಹಿತ್ಯಕ ಕಾರ್ಯಗಳು ಹೆಚ್ಚು ವಿಸ್ತಾರವನ್ನು ಪಡೆಯುತ್ತಿವೆ. ಉನ್ನತ ಮಟ್ಟದ ಮತ್ತು ಮೌಲಿಕ ಸಾಹಿತ್ಯವನ್ನು ರಚಿಸಿರುವ ನಾಮಾಂಕಿತ ಸಾಹಿತಿಗಳನ್ನು ಮತ್ತು ವಿದ್ವಾಂಸರನ್ನು ಒಳಗೊಂಡಿರುವ ವಿಶ್ವ ಕೊಂಕಣಿ ಸಾಹಿತ್ಯ ಅಕಾಡೆಮಿಯನ್ನು ಸ್ಥಾಪಿಸಲಾಗಿದೆ. ಕರ್ನಾಟಕ, ಗೋವಾ, ಕೇರಳ ಮತ್ತು ಮಹಾರಾಷ್ಟ್ರ ಪ್ರಾಂತ್ಯಗಳಿಂದ ಸುಪ್ರಸಿದ್ಧ ಕೊಂಕಣಿ ಲೇಖಕರು, ಸಾಹಿತಿಗಳು ವಿಶ್ವ ಕೊಂಕಣಿ ಸಾಹಿತ್ಯ ಅಕಾಡೆಮಿಯ ಸಲಹಾಗಾರರಾಗಿ ಸಹಕರಿಸುತ್ತಿದ್ದಾರೆ. ಕೊಂಕಣಿ ಸಾಹಿತ್ಯವು ಅಂತರಾಷ್ಟ್ರೀಯ ಮಟ್ಟದಲ್ಲಿ ಗುರುತಿಸಿಕೊಳ್ಳುವಂತೆ ಮಾಡಲು ಕ್ರಿಯಾ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆ. ಕಳೆದ 3–4 ವರ್ಷಗಳಲ್ಲಿ 15 ಮೌಲಿಕ ಸಾಹಿತ್ಯ ಕೃತಿಗಳನ್ನು, ನಿಘಂಟುಗಳನ್ನು, ಮತ್ತು ಕೊಂಕಣಿ, ಇಂಗ್ಲಿಷ್, ಹಿಂದಿ, ಕನ್ನಡ, ಮಲೆಯಾಳಂ ಭಾಷೆಗಳಲ್ಲಿ ಅನುವಾದ ಕೃತಿಗೆಳನ್ನು ಪ್ರಕಟಿಸಲಾಗಿದೆ. ಜೊತೆಗೆ ಬಾಲ ಸಾಹಿತ್ಯ ಮಾಲಿಕೆಯಲ್ಲಿ ಕೊಂಕಣಿ ಭಾಷೆಯ 8 ಕೃತಿಗಳನ್ನು ಮತ್ತು 30 ವರ್ಣರಂಜಿತ ದ್ವಿಭಾಷಿಕ (ಇಂಗ್ಲಿಷ್–ಕೊಂಕಣಿ) ಕೃತಿಗಳನ್ನು ಪ್ರಕಟಿಸಲಾಗಿದೆ.

ಇಂದು ಭಾರತ ಮತ್ತು ವಿದೇಶಗಳ ಸಾಹಿತ್ಯಕಾರರಿಗೆ, ಭಾಷಾತಜ್ಞರಿಗೆ, ವಿದ್ವಾಂಸರಿಗೆ ಮತ್ತು ಹೆಚ್ಚಾಗಿ ವಾಚಕ ವೃಂದಕ್ಕೆ ಕೊಂಕಣಿ ಭಾಷಾ ಸಾಹಿತ್ಯವನ್ನು ಪರಿಚಯಿಸಬೇಕಾದ ಅಗತ್ಯ ಇದೆ. ವಿಶ್ವ ಕೊಂಕಣಿ ಸಾಹಿತ್ಯ ಅಕಾಡೆಮಿಯು ಅನ್ಯ ಭಾಷೆಗಳ ಸಾಹಿತ್ಯವನ್ನು ಕೊಂಕಣಿ ಲೇಖಕರಿಗೆ, ಓದುಗರಿಗೆ ಪರಿಚಯಿಸುವ ಕಾರ್ಯವನ್ನು ಮಾಡುತ್ತಿದೆ. ಈ ಮಹತ್ವದ ಉದ್ದೇಶಗಳನ್ನು ಕಾರ್ಯರೂಪಕ್ಕಿಳಿಸಲು ಅನುವಾದ ಒಂದು ಉತ್ತಮ ಮಾಧ್ಯಮವೆಂದು, ಈ ದಿಕ್ಕಿನಲ್ಲಿ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆ. ಕೊಂಕಣಿ ಲೇಖಕರಿಗಾಗಿ, ಅದರಲ್ಲಿಯೂ ಯುವ ಸಾಹಿತಿಗಳಿಗಾಗಿ ಭಾಷಾಂತರ ಕಾರ್ಯಾಗಾರಗಳನ್ನು ಹಮ್ಮಿಕೊಳ್ಳಲಾಗುತ್ತಿದೆ

ಶ್ರೀ ಗೋಕುಲದಾಸ ಪ್ರಭುರವರು ಕೊಚ್ಚಿಯಲ್ಲಿ ತನ್ನ ಶಾಲಾ ದಿನಗಳಿಂದಲೂ ಕೊಂಕಣಿ ಮತ್ತು ಮಳಯಾಳಂ ಭಾಷೆಗಳ ಸಾಹಿತ್ಯವನ್ನು ಅಭ್ಯಸಿಸಿದವರು. ಅದರಿಂದಾಗಿ ತನ್ನ ಮಾತೃಭಾಷೆ ಕೊಂಕಣಿಯಲ್ಲಿ ಹಲವಾರು ಸಣ್ಣ ಕತೆಗಳನ್ನು ಹೆಣೆದವರು ಅಲ್ಲದೇ ಮಳಯಾಳಂ ಸಾಹಿತ್ಯ ಕೃತಿಗಳನ್ನು ಕೊಂಕಣಿ ಭಾಷೆಗೆ ಅನುವಾದ ಮಾಡಿದವರು ಮಾತ್ರವಲ್ಲದೇ ಕೊಂಕಣಿ ಭಾಷಾ ಚಳುವಳಿಯುಲ್ಲಿಯೂ ಶ್ರೀ ಪ್ರಭುಗಳು ಕ್ರಿಯಾಶೀಲರಾಗಿದ್ದು ದುಡಿಯುತ್ತಲಿದ್ದು ಅಖಿಲ ಭಾರತ ಕೊಂಕಣಿ ಪರಿಷದನ ಕಾರ್ಯದರ್ಶಿಯಾಗಿ ಮತ್ತು ಈಗ ಕಾರ್ಯಾಧ್ಯಕ್ಷರಾಗಿಯೂ ದುಡಿಯುತ್ತಿದ್ದಾರೆ. ಅವರ ಕೊಂಕಣಿ ಸಣ್ಣ ಕಥೆಗಳ ಪುಸಕೆಕ್ಕೆ ಮತ್ತು ಭಾಷಾಂತರ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಲಭ್ಯವಾಗಿದೆ. ಅವರೆ "ಋತು ಸಂಕ್ರಮಣ ಮತ್ತು ಇತರ ಕಥೆಗಳು" ಕೊಂಕಣಿ ಪುಸಕೆವನ್ನು ಬೆಂಗಳೂರಿನ ನಾಮಾಂಕಿತ ಕನ್ನಡ ಅನುವಾದಕಿ, ಡಾ. ಗೀತಾ ಶೆಣೈಯವರು ಕನ್ನಡ ಭಾಷೆಗೆ ಅನುವಾದಿಸಿದ್ದಾರೆ. ಲೇಖಕ ಶ್ರೀ ಕೆ. ಗೋಕುಲದಾಸ ಪ್ರಭುಗಳವರಿಗೂ, ಡಾ. ಗೀತಾಶೆಣೈಯವರಿಗೂ ನಮ್ಮ ಕೃತಜ್ಞತೆಗಳು.

ಸುಂದರ ಮುಖ ಪುಟವನ್ನು ರಚಿಸಿದ ಬೆಂಗಳೂರಿನ ಕಲಾವಿದ ಶ್ರೀ ರಘು ಅಪಾರ ಅವರಿಗೆ ಮತ್ತು ಈ ಗ್ರಂಥವನ್ನು ಸುಂದರವಾಗಿ ಮುದ್ರಿಸಿರುವ ಪ್ರೇಮಸಾಯಿ ಪ್ರಕಾಶನದ ಶ್ರೀ ಸುಶೀಲ್ ಪೈ, ಅವರಿಗೆ ವಿಶ್ವಕೊಂಕಣಿ ಕೇಂದ್ರದ ವತಿಯಿಂದ ಕೃತಜ್ಞತೆಗಳು.

31–03–2013
ಶಕ್ತಿನಗರ, ಮಂಗಳೂರು–575016

**ಬಸ್ತಿ ವಾಮನ ಶೆಣೈ**
ವಿಶ್ವ ಕೊಂಕಣಿ ಕೇಂದ್ರ ಅಧ್ಯಕ್ಷರು

# ಅನುವಾದಕರ ಮಾತು

ಶ್ರೀ ಗೋಕುಲದಾಸ ಪ್ರಭು ಕೊಂಕಣಿ ಭಾಷೆಯ ಉತ್ತಮ ಕಥಾಲೇಖಕರಲ್ಲಿ ಒಬ್ಬರು. 1986ರಲ್ಲಿ "ಪೃಥಿವ್ಯೈ ನಮಃ" ಎಂಬ ಕಿರುಕಾದಂಬರಿಯನ್ನು ಪ್ರಕಟಿಸುವ ಮೂಲಕ ಕೊಂಕಣಿ ಸಾಹಿತ್ಯಕ್ಷೇತ್ರವನ್ನು ಪ್ರವೇಶಿಸಿದ ಇವರು "ಅಂತರ ಆಯಾಮಿ" ಎಂಬ ಕಥಾಸಂಕಲನವನ್ನು ಪ್ರಕಟಿಸಿದ್ದಾರೆ. ಮಲೆಯಾಳಿ ಭಾಷೆಯಿಂದ ಎಂ.ಟಿ.ವಾಸುದೇವನ್ ನಾಯರ್ ಮತ್ತು ಕೆ.ಪಿ. ರಾಮುನ್‌ಉಣ್ಣಿಯುವರ ಕಾದಂಬರಿಗಳನ್ನು ಕೊಂಕಣಿಗೆ ಅನುವಾದಿಸಿದ್ದಾರೆ. ಕರ್ನಾಟಕ, ಕೇರಳ ಮತ್ತು ಗೋವಾ ರಾಜ್ಯಗಳ ವಿವಿಧ ಕೊಂಕಣಿ ಭಾಷಾ ಸಂಸ್ಥೆಗಳೊಂದಿಗೆ ನಿಕಟ ಸಂಪರ್ಕ ದಲ್ಲಿದ್ದು ಭಾಷಾಭಿವೃದ್ಧಿ ಕಾರ್ಯಗಳಲ್ಲಿ ನಿರಂತರವಾಗಿ ತೊಡಗಿಸಿಕೊಂಡಿದ್ದಾರೆ. ಅವರ ಹನ್ನೆರಡು ಕತೆಗಳ ಕನ್ನಡ ಅನುವಾದ ಈ ಸಂಕಲನದಲ್ಲಿ ಇದೆ.

ಗೋಕುಲದಾಸ ಪ್ರಭು ಅವರ ಕೆಲವು ಬಿಡಿ ಕತೆಗಳನ್ನು ಕನ್ನಡಕ್ಕೆ ಅನುವಾದಿಸುವ ಕಾರ್ಯ ನನ್ನ ಪಾಲಿಗೆ ಬಂದಾಗ, ಇವುಗಳನ್ನು ಓದುತ್ತಿದ್ದಂತೆ ಬೇರೆ ಬೇರೆ ಕಾರಣಗಳಿಗಾಗಿ ಈ ಕತೆಗಳು ನನ್ನಲ್ಲಿ ಅಚ್ಚರಿಯನ್ನು ಮತ್ತು ಮೆಚ್ಚುಗೆಯನ್ನು ಮೂಡಿಸಿದ್ದಂತೂ ನಿಜ. ಮೊದಲನೆಯದಾಗಿ ಬರಹಗಾರರ 'ಪರಕಾಯಪ್ರವೇಶ'ದ ಮನೋಭೂಮಿಕೆ ಸಮರ್ಥ ರೀತಿಯಿಂದ ಕಾರ್ಯನಿರ್ವಹಿಸಿದ್ದಲ್ಲಿ ಕತೆಯ ಯಶಸ್ಸು ಖಚಿತ ಎನ್ನುವ ಮಾತಿಗೆ ಉಜ್ವಲ ಉದಾಹರಣೆಗಳಾಗಿ ಈ ಕತೆಗಳು ನನಗೆ ಕಂಡು ಬಂದವು. ಗೋಕುಲದಾಸ್ ಪ್ರಭು ಸಂವೇದನಾಶೀಲ ಲೇಖಕ ಎನ್ನುವುದನ್ನು ಎರಡು ಮಾತಿಲ್ಲ. ಆದರೆ ಇಲ್ಲಿ ವಿಶೇಷವಾಗಿ ಉಲ್ಲೇಖಗೊಳ್ಳಬೇಕಾಗಿರುವುದು ಅವರು ಸ್ತ್ರೀಸಂವೇದನೆಯನ್ನು ಕಟ್ಟಿಕೊಡುವ ರೀತಿ. ಈ ಸಂಕಲನದ ಬಹುಪಾಲು ಕತೆಗಳು ಸ್ತ್ರೀಪಾತ್ರ ಕೇಂದ್ರಿತವಾಗಿವೆ. ಇದರಲ್ಲಿ ಎಲ್ಲಾ ವರ್ಗಗಳಿಗೆ ಸೇರುವ ಮಹಿಳೆಯರಿದ್ದಾರೆ. ಶಾಲಾ ವಿದ್ಯಾರ್ಥಿನಿ, ಶಿಕ್ಷಕಿ, ಎಳೆತಾಯಿ, ಮುದಿತಾಯಿ, ಶೋಕಭರಿತೆ ತಾಯಿ, ಹೆಣ್ಣಾಳು, ಪರಿತ್ಯಕ್ತೆ, ಆದರ್ಶ ಸೋದರಿ, ಆದರ್ಶ ಪತ್ನಿ ಹೀಗೆ.. ಈ ಎಲ್ಲಾ ಪಾತ್ರಗಳ ಮಾನಸಿಕ ತುಮುಲವನ್ನು, ದೈಹಿಕ ನೋವನ್ನು ಅನಾವರಣಗೊಳಿಸಿ ಅದಕ್ಕೆ ಕಾರಣವಾದಂತಹ ಸಾಮಾಜಿಕ ಮತ್ತು ಕೌಟುಂಬಿಕ ಪರಿಸ್ಥಿತಿಗಳನ್ನು ವಿಶ್ಲೇಷಣೆಗೆ ಒಳಪಡುವ ಈ ಲೇಖಕ ಇಲ್ಲಿ ಯಾವುದು ಸರಿ, ಯಾವುದು ತಪ್ಪು ಎನ್ನುವ ತೀರ್ಮಾನ ಕೈಗೊಳ್ಳುವ ಜವಾಬ್ದಾರಿಯನ್ನು ಓದುಗರಿಗೇ ಬಿಟ್ಟುಕೊಡುತ್ತಾರೆ. ಸೂರ್ಯನಷ್ಟೇ ನಿಖರವಾದ ದಿನಚರಿಯನ್ನು ಹೊಂದಿದ ಕಾಯಕನಿರತೆ ಭುಂಡಿಗೆ, ಆಸರೆ ಬೇಡುತ್ತಾ ಮನೆಮನೆಗೆ ಅಲೆಯುವ ವ್ಯಾಧಿಗ್ರಸ್ತೆ ದುರಪದಳಿಗೆ ಮತ್ತು ಬಾರದ ಗಂಡನ ನಿರೀಕ್ಷೆಯಲ್ಲಿ ಕಾಲಕಳೆದ ಸಾವತ್ರಕ್ಕನಿಗೆ ಸಿಗುವ ಆಘಾತಕಾರಿ ಅಂತ್ಯಕ್ಕೆ ಹೊಣೆ ಯಾರು ಎನ್ನುವುದು ಇಲ್ಲಿ ಮಹತ್ವದ ಪ್ರಶ್ನೆಯಾಗುತ್ತದೆ. ಯಾರೋ ಮಾಡಿದ ತಪ್ಪಿಗೆ ಯಾರೋ ತಲೆಕೊಡಬೇಕಾದ ದುರಂತ ಕಾಣಿಸಿಕೊಂಡಾಗ ಅಪರಾಧಿ

ಮನೋಭಾವ ಕಾಡುವುದು ಬಲಿಪಶುಗಳಲ್ಲಿಯೇ ವಿನಹ ತಪ್ಪಿತಸ್ಥರಲ್ಲಿ ಅಲ್ಲ ಎನ್ನುವುದನ್ನು 'ಏಕಾಂಗಿ ಸಂಜೆ' ಮತ್ತು 'ಗಾಯ' ಕತೆಗಳು ನಿರೂಪಿಸುತ್ತವೆ. ಅತ್ತಿಗೆ-ಮೈದುನ, ಅಕ್ಕ-ತಮ್ಮನ ನಡುವಿನ ನಿಷ್ಕಲ್ಮಶ ಮತ್ತು ನಿಸ್ವಾರ್ಥದ ಸಂಬಂಧವನ್ನು ಅವರು ಅಚ್ಚುಕಟ್ಟಾಗಿ ವಿವರಿಸಿದ್ದಾರೆ.

ಕ್ರಿಯಾಶೀಲ ಲೌಕಿಕ ಬದುಕಿನ ಅಂತ್ಯ ಮತ್ತು ವೃದ್ಧಾಪ್ಯದ ಆಗಮನದೊಂದಿಗೆ ಸಾಮಾನ್ಯ ಜನರ ಬದುಕಿನಲ್ಲಿ ಕಾಡುವ ಏಕಾಂಗಿತನ ಮತ್ತು ಚಡಪಡಿಕೆಗೆ ಮತ್ತು ಅವರ ಅಶಾಂತ ಮನೋಧರ್ಮಕ್ಕೆ ಪರಿಹಾರಾತ್ಮಕ ಉದಾಹರಣೆಯೆಂಬಂತೆ ಇಲ್ಲಿ ವಾನಪ್ರಸ್ಥ ಕೈಗೊಳ್ಳುವ ಯಾಜ್ಞವಲ್ಕ್ಯರ ನಿರ್ಧಾರ ಮತ್ತು ವಿರಕ್ತಿಯೇ ಮೂರ್ತೀಭವಿಸಿ ದಂತಿರುವ ಗೊಮ್ಮಟೇಶ್ವನ ಪ್ರತಿಮೆಯ ಸನ್ನಿಧಿಯನ್ನು ಬಹಳ ಉತ್ತಮರೀತಿಯಿಂದ ವಿವರಿಸಲಾಗಿದೆ.

ದಿನನಿತ್ಯದ ಬಳಕೆಯಲ್ಲಿರುವ ಕೊಂಕಣಿ ಆಡುಭಾಷೆಯ ಮಾಧುರ್ಯವನ್ನು ಸವಿಯಬೇಕಾದರೆ ಗೋಕುಲದಾಸ ಪ್ರಭು ಅವರ ಮೂಲ ಕೊಂಕಣಿ ಕತೆಗಳನ್ನು ಓದಬೇಕು. ಸಂಭಾಷಣೆಗಳೇ ಪ್ರಧಾನವಾಗಿರುವ ಈ ಕತೆಗಳಲ್ಲಿ ಅದಕ್ಕೆ ಹೆಚ್ಚಿನ ಅವಕಾಶ ದೊರೆತಿದೆ. ಈ ಕತೆಗಳು ಕನ್ನಡ ಅನುವಾದ ಸಾಹಿತ್ಯಕ್ಕೆ ಉತ್ತಮ ಕಾಣಿಕೆ ಯಾಗಬಲ್ಲವು ಎಂಬುದು ನನ್ನ ನಂಬಿಕೆ.

ವಿಶ್ವಕೊಂಕಣಿ ಕೇಂದ್ರದ ಭಾಷಾಂತರ ಯೋಜನೆಯಲ್ಲಿ ಪಾಲುಗೊಂಡು ಈ ಕೃತಿಯನ್ನು ರಚಿಸಲು ಅವಕಾಶ ನೀಡಿದ ಕೊಂಕಣಿ ಭಾಷೆ ಮತ್ತು ಸಂಸ್ಕೃತಿ ಪ್ರತಿಷ್ಠಾನದ ಅಧ್ಯಕ್ಷರಾದ ಶ್ರೀ ಬಸ್ತಿ ವಾಮನ ಶೆಣೈ ಅವರಿಗೆ ಮತ್ತು ಈ ಸಂಸ್ಥೆಯ ಆಡಳಿತವರ್ಗದವರಿಗೆ ನನ್ನ ಕೃತಜ್ಞತೆಗಳು. ಇಲ್ಲಿನ ಕತೆಗಳ ಅನುವಾದಕ್ಕಾಗಿ ಅನುಮತಿ ನೀಡಿ ಹಸ್ತಪ್ರತಿಯನ್ನು ಒದಗಿಸಿ, ನನಗೆ ಸಂದೇಹವಿದ್ದಲ್ಲಿ ಬೇಸರಿಸದೆ ವಿವರಗಳನ್ನು ನೀಡಿ ಸಹಕರಿಸಿದ ಕತೆಗಾರ ಗೋಕುಲದಾಸ್ ಪ್ರಭು ಅವರಿಗೆ ನನ್ನ ಧನ್ಯವಾದಗಳು. ಕರಡು ತಿದ್ದುವಲ್ಲಿ ನೆರವು ನೀಡಿದ ಪ್ರೇಮಸಾಯಿ ಮುದ್ರಣಾಲಯದ ಶ್ರೀ ಸುಶೀಲ್ ಪೈ ಅವರಿಗೆ ನನ್ನ ಕೃತಜ್ಞತೆಗಳು. ಬಹಳ ಕಡಿಮೆ ಅವಧಿಯಲ್ಲಿ ಸುಂದರವಾದ ಮತ್ತು ಆಕರ್ಷಕ ಮುಖಪುಟವನ್ನು ರಚಿಸಿದ ಕಲಾವಿದ ಶ್ರೀ ಅಪಾರ ರಘು ಅವರಿಗೆ ಆತ್ಮೀಯ ಧನ್ಯವಾದಗಳು.

ಎಂದಿನಂತೆ ನನ್ನ ಎಲ್ಲಾ ಸಾಹಿತ್ಯಕ ಕಾರ್ಯಗಳಿಗೆ ಒತ್ತಾಸೆ ಮತ್ತು ಸಹಕಾರವನ್ನು ಪ್ರೀತಿಯಿಂದ ನೀಡುತ್ತಾ ಬಂದಿರುವ ನನ್ನ ಪತಿ ಶ್ರೀ ರಮಾನಂದ ಶೆಣೈ ಅವರಿಗೆ ನನ್ನ ಪ್ರೀತಿಪೂರ್ವಕ ಕೃತಜ್ಞತೆಗಳು.

31-03-2013
ಬೆಂಗಳೂರು

**ಡಾ. ಗೀತಾ ಶೆಣೈ**

# ಒಳಗಿನ ಪುಟಗಳಲ್ಲಿ

# ಕಲೆಗಳು

ನಾನು ಸ್ನೇಹಿತರೊಂದಿಗೆ ಶಾಲೆ ಮುಗಿಸಿ ಮನೆಗೆ ಹೋಗುತ್ತಿದ್ದೆ. ಸಂಜೆಯ ತಂಪು ಬಿಸಿಲು ರಸ್ತೆಯಲ್ಲಿ ಹರಡಿಕೊಂಡಿತ್ತು. ಎರಡು ದೇವಾಲಯಗಳು ಮತ್ತು ಅದರ ನಡುವೆ ಇರುವ ಕೆರೆಯನ್ನು ಸ್ಪರ್ಶಿಸುತ್ತಾ ರಸ್ತೆ ಮುಂದೆ ಸಾಗಿತ್ತು. ನಾವು ಒಬ್ಬರಿಗೊಬ್ಬರು ತಮಾಷೆ ಮಾಡುತ್ತಾ ಹೋಗುತ್ತಿರುವಾಗ ರಸ್ತೆಯ ಪಕ್ಕದಲ್ಲಿರುವ ಮನೆಯ ಮುಂಬಾಗಿಲಿನ ಬಳಿ ಆ ವಯಸ್ಸಾದ ಹೆಂಗಸು ನಮ್ಮ ಕಣ್ಣಿಗೆ ಬಿದ್ದಳು. ಅವಳು ಕೆಂಪು ಸೀರೆಯುಟ್ಟು ತಲೆಯ ಮೇಲೆ ಸೆರಗು ಹೊದ್ದುಕೊಂಡಿದ್ದಳು. ಅವಳ ಕೈಯಲ್ಲಿ ಒಂದು ಮಾಸಿದ ಪುಟ್ಟ ಚೀಲ. ಅವಳು ಒಳಗಿನಿಂದ ಹೊರಗೆ ಬರುವವರ ದಾರಿ ಕಾಯುತ್ತಿರುವ ಹಾಗೆ ಕಂಡಿತು.

ನನ್ನ ಕಿಲಾಡಿ ಗೆಳೆಯನೊಬ್ಬ "ಕೆಂಪೀ" ಎಂದು ಕರೆದು ಅವಳನ್ನು ಅಪಹಾಸ್ಯ ಮಾಡಿದ.

ತಕ್ಷಣ ತಿರುಗಿಕೊಂಡ ಅವಳ ಹರಿತವಾದ ದೃಷ್ಟಿ ನಮ್ಮ ಮೇಲೆ ಬಿತ್ತು. ಅದರ ತೀಕ್ಷ್ಣತೆಗೆ ನನ್ನ ಗೆಳೆಯ ಬೆದರಿ ಪೆಚ್ಚಾದ. ನಾವು ಏನೂ ನಡೆದಿಲ್ಲವೆನ್ನುವ ಹಾಗೆ ಸುಮ್ಮನೆ ಹೆಜ್ಜೆ ಹಾಕಿದೆವು. ಆದರೆ ಅವಳ ಮಾತುಗಳು ನಮ್ಮನ್ನು ಬೆನ್ನಟ್ಟಿ ಬಂದವು.

"ನಾಯಿಜಾತಿಗಳೇ, ಯಾರೋ ಕೆಂಪಿ? ನಿಮ್ಮ ಅಮ್ಮನೇನೋ? ಮನೆಗೆ ಹೋಗಿ ಕೆಂಪಿ ಅಂತ ಅವಳನ್ನು ಕರಿ ನೋಡೋಣ! ರಂ... ಮಗನೇ! ಶಾಲೆಗೆ ಹೋಗುವುದು ಇದನ್ನು ಕಲಿಯುವುದಕ್ಕೇನು?"

ನಮ್ಮ ಸ್ನೇಹಿತ ಸುಮ್ಮನೆ ಬೆತ್ತ ಕೊಟ್ಟು ಪೆಟ್ಟು ತಿಂದ ಎಂದುಕೊಂಡು ನಾವು ಮುಸಿಮುಸಿ ನಕ್ಕೆವು.

ಮನೆಗೆ ಹೋದ ಕೂಡಲೇ ಈ ಘಟನೆಯನ್ನು ನಾನು ಅಮ್ಮನಲ್ಲಿ ಹೇಳಿದೆ. ಅವಳು ನನಗೆ ಎಚ್ಚರಿಕೆ ಕೊಟ್ಟಳು, "ಕೆಂಪಿ ಬೆಂಪಿ ಅಂತ ಹೇಳಿ ಆ ಗಬ್ಬು ಬೋಳಿಯ ಹತ್ತಿರ ಹೋಗಬೇಡ ತಿಳಿಯಿತೇ? ಅವಳ ನಾಲಿಗೆಗೆ

ಎಲುಬಿಲ್ಲ. ಮನೆಯವರೊಂದಿಗೆ ದ್ವೇಷ ಕಟ್ಟಿಕೊಂಡು, ಮನೆಮಾರು ಬಿಟ್ಟು ಅಲ್ಲಿ ಇಲ್ಲಿ ಅಲೆದಾಡಿಕೊಂಡಿರುತ್ತಾಳೆ. ಯಾರು, ಎತ್ತ ಎಂದು ನೋಡದೆ ಬೈಯ್ದು ಬಿಡುತ್ತಾಳೆ. ಆದ್ದರಿಂದಲೇ ಯಾರೂ ಅವಳನ್ನು ಹತ್ತಿರ ಸೇರಿಸುವುದಿಲ್ಲ. ಸುಮ್ಮನೆ ಹೋಗಿ ಅವಳ ಬಾಯಿಗೆ ಬೀಳಬೇಡ."

ಆದರೆ ಮರುದಿನ ಬೇಡವೆನಿಸಿದ್ದೇ ನಡೆದುಹೋಯಿತು. ಶಾಲೆಗೆ ಹೋಗುವಾಗ ಅವಳು ಕೆರೆಯ ಸಮೀಪದ ಮನೆಯ ತೆರೆದ ಚಾವಡಿಯಲ್ಲಿ ಕುಳಿತಿರುವುದು ಕಂಡಿತು. ಮೊದಲೇ ಅವಳನ್ನು ನೋಡಿದ್ದರಿಂದ ನಾನು ರಸ್ತೆಯ ಇನ್ನೊಂದು ಬದಿಗೆ ಸರಿದುಹೋದೆ. ಜಾಗ್ರತೆಯಾಗಿ ಅವಳಿಂದ ತಪ್ಪಿಸಿ ಹೋಗಲು ನೋಡಿದರೆ ಅವಳ ಕೂಗು ಕೇಳಿಬಂತು, "ಮಗೂ, ಇಲ್ಲಿ ಬಾರೋ"

ನನಗೆ ಗೊಂದಲವಾಯಿತು. ಅವಳ ಮಾತು ಕೇಳಲು ನಿಂತುಕೊಳ್ಳಬೇಕೇ, ಅಥವಾ ಸುಮ್ಮನೆ ಮುಂದುವರಿಯಬೇಕೇ? ಮಾತನಾಡಲು ನಿಂತರೆ ಗೆಳೆಯರು ಗೇಲಿ ಮಾಡ್ತಾರೆ ಮತ್ತು ಮನೆಯವರು ಸಿಟ್ಟಿಗೇಳುತ್ತಾರೆ. ಆದರೆ ಮಾತನಾಡದೆ ಮುಂದೆ ಹೋದರೆ ಹಿಂದಿನಿಂದ ಇವಳು ನನಗೆ ಬೈದುಬಿಡುತ್ತಾಳೆ. ಆಗ ಕೂಡಾ ಗೆಳೆಯರ ಗೇಲಿ ಮಾತುಗಳನ್ನು ಕೇಳಲೇಬೇಕಾಗುತ್ತದೆ. ಆಲೋಚಿಸಲು ಸಮಯ ಇರಲಿಲ್ಲ. ಓಡಲು ಕಾಲು ಏಳಲಿಲ್ಲ. ಅವಳು ಮತ್ತೆ ಕೂಗಿದಳು, "ಇಲ್ಲಿ ಬಾರೋ."

ನಾನು ತಡೆದು ನಿಂತು ಅವಳಿಗೆ ಹೇಳಿದೆ, "ಶಾಲೆಗೆ ಹೋಗಲು ಹೊತ್ತಾಗಿದೆ.."

"ಹೊತ್ತಾದರೆ ಏನಾಯಿತು? ಅವರು ನಿನ್ನನ್ನು ನುಂಗಿ ಬಿಡ್ತಾರೇನು?"

"ನುಂಗಿದರೆ ನುಂಗಿ ಬಿಡಲಿ' ಎಂದು ಹೇಳಬೇಕೆಂದು ತುಟಿಯವರೆಗೆ ಬಂತು. ಆದರೆ ನಾನು ಸುಮ್ಮನೆ ನಿಂತುಕೊಂಡೆ. ಗೆಳೆಯರು ಹತ್ತಿರವೇ ನಿಂತುಕೊಂಡು ನೋಡುತ್ತಿದ್ದರು.

"ನೀನು ಆ ಪೊಪ್ಯಾನ ಮೊಮ್ಮಗನಲ್ಲವೇ?"

ನಾನು ಆಶ್ಚರ್ಯಚಕಿತನಾದೆ. ನನ್ನ ಅಜ್ಜನ ಹೆಸರು ಮತ್ತು ನಾನು ಅವರ ಮೊಮ್ಮಗ ಎನ್ನುವುದು ಇವಳಿಗೆ ಹೇಗೆ ಗೊತ್ತಾಯಿತು?

"ಅದು ನಿನಗೆ ಹೇಗೆ ಗೊತ್ತಾಯಿತು?"

ಅವಳ ಸುಕ್ಕುಗಟ್ಟಿದ ಮುಖ ಮತ್ತು ಕೆರೆದು ಕೆರೆದು ಬಿಳುಪೇರಿ ಜಡ್ಡುಕಟ್ಟಿದ ಚರ್ಮವನ್ನು ನೋಡುತ್ತಾ ನಿಂತುಕೊಂಡೆ. ಅವಳ ಸೀರೆ ತುಂಬಾ ಹಳೆಯದಾಗಿತ್ತು. ಅದರ ಮೇಲೆ ಅಲ್ಲಲ್ಲಿ ಕಪ್ಪು ಕಲೆಗಳಿದ್ದವು. ಮನಸ್ಸಿನಲ್ಲಿ ಜುಗುಪ್ಸೆ ತುಂಬಿಕೊಂಡಿತು.

"ನಿನ್ನನ್ನು ನೋಡಿದರೆ ತಿಳಿಯುತ್ತೆ ಕಣೋ. ಪೊಪ್ಪ್ಯಾನದೇ ಮೂಗು, ದೊಡ್ಡ ಕಿವಿ ಮತ್ತು ಬಣ್ಣ ಇದೆಯಲ್ಲವೋ ನಿನಗೆ."

ನಾನು ಮಾತಿಲ್ಲದೆ ನಿಂತೆ.

"ಅದಿರಲಿ. ನೀನು ಯಾರ ಮಗ? ಗಿರಿಯದೋ ಅಥವಾ ನಾನ್ನನದೋ?"

"ಗಿರಿಯ ಮಗ"

"ಸರಿ. ಈಗ ಹೇಳು, ನಿಮ್ಮ ಮನೆ ವಿಶಾಲವಾಗಿದೆ ತಾನೇ? ಅದರಲ್ಲಿ ನನಗೆ ಒಂದು ಕೋಣೆ ನೀಡುವಂತೆ ಗಿರಿಯಲ್ಲಿ ಹೇಳ್ತೀಯಾ?"

ಇದೊಳ್ಳೆ ಕತೆ! ನಾನು ಯೋಚಿಸತೊಡಗಿದೆ. ಇವಳು ನಮಗೆ ಏನಾಗಬೇಕು? ಬುಗುಟು ಜಾತಿಯದು! ನಮ್ಮಲ್ಲಿ ಬಂದು ಇರಲು ನೋಡುತ್ತಾಳೆ! ದಾರಿಯಲ್ಲಿ ಬಿದ್ದ ಜನರನ್ನು ತಂದು ಮನೆಯಲ್ಲಿ ಇಟ್ಟುಕೊಳ್ಳಲು ನಮ್ಮ ಮನೆ ಏನು ಛತ್ರವೇ? ಇನ್ನು ಈ ಬೇಡಿಕೆಯನ್ನು ಹಿಡಿದು ನಾನು ಅಪ್ಪನ ಬಳಿ ಹೋಗಬೇಕು! ಹೇಳಿದ ಕೂಡಲೇ ಅವರು ಇವಳನ್ನು ಗಪ್ಪೆಂದು ನುಂಗಿಬಿಟ್ಟಾರು ಸಧ್ಯ!

"ನಾನು ಹೋಗ್ತೇನೆ, ಶಾಲೆಗೆ ಹೊತ್ತಾಯಿತು."

"ಸರಿ, ಹೋಗು ಹೋಗು. ನಾನು ಆಮೇಲೆ ನಿಮ್ಮಲ್ಲಿಗೆ ಬರ್ತೇನೆ. ನಿನ್ನ ಅಮ್ಮನ ಹತ್ತಿರ ಮಾತನಾಡುವುದಿದೆ."

ನಾನು ಹೆಜ್ಜೆ ಮುಂದಿಟ್ಟೆ.

"ಲಕ್ಕಿ ಕಣೋ ಇವನು! ಕೆಂಪಿ ಇವನ ಮನೆಯಲ್ಲಿ ಇರಲು ಬರ್ತಾಳೆ! ಇನ್ನು ಮನೆ ತುಂಬಾ ಸುವಾಸನೆ ಹರಡಿಕೊಳ್ಳುತ್ತೆ"

ಗೆಳೆಯರು ಬಿದ್ದು ಬಿದ್ದು ನಕ್ಕರು. ನಾನು ಅವರಿಗೆ ಬೆನ್ನು ಹಾಕಿ ವೇಗವಾಗಿ ನಡೆದುಹೋದೆ.

ದೇವಾಲಯದ ಪಶ್ಚಿಮ ದಿಕ್ಕಿನಲ್ಲಿರುವ ವಠಾರದ ಒಂದು ಮನೆಯ ಎದುರು ಏಳೆಂಟು ಜನರು ಗುಂಪುಕಟ್ಟಿ ನಿಂತಿದ್ದಾರೆ. ಮನೆಯೊಳಗಿನಿಂದ ಯಾರೋ ದೊಡ್ಡಧ್ವನಿ ತೆಗೆದು ಗದರುತ್ತಿದ್ದಾರೆ,

"ಏಳೇ, ಇಲ್ಲಿಂದ ತೊಲಗು..."

ನಾನು ಗುಂಪಿನಲ್ಲಿ ದಾರಿ ಮಾಡಿಕೊಂಡು ಮುಂದೆ ಹೋಗಿ ನಿಂತುಕೊಂಡೆ. ನೋಡಿದರೆ ಆ ಮನೆಯ ಜಗಲಿಯ ಮೇಲೆ 'ಕೆಂಪಿ' ಕುಳಿತಿದ್ದಾಳೆ. ಮನೆಮಾಲಿಕ ಅವಳಿಗೆ ಗದರುತ್ತಿದ್ದಾನೆ.

"ದರಿದ್ರ ಮುಂಡೇದು! ಎದ್ದು ಹೋಗ್ತಿಯೋ, ಇಲ್ಲಾ ಪೋಲಿಸರನ್ನು ಕರೆಯಲೋ?"

"ಕರೆಯೋ, ಕರಿ. ಮನೆಬಾಗಿಲಿಗೆ ಬಂದವರಿಗೆ ಹೀಗಾ ಹೇಳೋದು ನೀನು! ನಿನ್ನ ಮನೆಯಲ್ಲಿ ಹೆಂಡತಿ, ತಂಗಿ ಇದ್ದಾರೆ ಹೌದಲ್ಲ. ಅವರನ್ನು ಹೀಗೆ ಕೆಟ್ಟದಾಗಿ ನಡೆಸಿಕೊಳ್ತೀ ಎನು? ನಡೆದು ಸುಸ್ತಾಯಿತೆಂದು ಐದು ನಿಮಿಷ ಕೂತಿದ್ದೆ.."

"ಕುಳಿತದ್ದು ಸಾಕು. ಕೂತ ಕಡೆಯೆಲ್ಲಾ ರಕ್ತದ ಕಲೆ ಮಾಡಿ ಹೋಗುತ್ತಿ. ಹೀಗೆ ದಾರಿ ಆಯಾಸ ಕಳೆಯಲು ಇದು ಛತ್ರವಲ್ಲ"

ಅವಳು ಜಗಲಿಯ ಕಂಬವನ್ನು ಆಧರಿಸಿ ನಿಧಾನವಾಗಿ ಎದ್ದು ನಿಂತಳು. ನಂತರ ಮೆಟ್ಟಲಿಳಿದು ಅಂಗಳಕ್ಕೆ ಬಂದಳು. ಆಗ ನೋಡಿದೆ, ಅವಳು ಕುಳಿತ ಜಾಗದಲ್ಲಿ ಕೊಳೆ ಮೆತ್ತಿಕೊಂಡಿತ್ತು.

ಯಾರೋ ವಿಚಾರಿಸಿದರು, ಅಮ್ಮಾ, "ನಿನಗೆ ಅಸೌಖ್ಯವಿದ್ದರೆ ಮನೆಯಲ್ಲಿ ಮಲಗಿರಬಹುದಲ್ಲ, ಯಾಕೆ ಸುಮ್ಮನೆ ಅಲ್ಲಿ ಇಲ್ಲಿ ಸುತ್ತಾಡಿಕೊಂಡು ಇರುತ್ತಿ?"

"ನನ್ನ ಮನೆ ಎಲ್ಲಿದೆ? ಮನೆ, ಆಸ್ತಿ ಎಲ್ಲವನ್ನೂ ಆ ಚಂಡಾಲ ನುಂಗಿ ಬಿಟ್ಟಿದ್ದಾನಲ್ಲ?"

"ಯಾರು ಅದು?"

"ಇನ್ನ್ಯಾರು? ನನ್ನ ಮಗನೇ, ನೀಚ. ಅವನ ತಲೆಯ ಮೇಲೆ ಸಿಡಿಲು ಬೀಳಲಿ"

"ಮತ್ತೆ, ನಿನಗೆ ಬೇರೆ ಯಾರೂ ಇಲ್ಲವಾ?"

"ಎಲ್ಲರೂ ಇದ್ದಾರೆ, ನನ್ನನ್ನು ಚಟ್ಟದ ಮೇಲೆ ಮಲಗಿಸಿ ಬೆಂಕಿ ಕೊಡಲು. ಹಾಳಾದವರು.."

ಹಿಂದಿನಿಂದ ಮನೆಮಾಲಿಕನ ಹೆಂಡತಿಯ ಧ್ವನಿ ಕೇಳಿಸಿತು.

"ದರಿದ್ರದ್ದು. ಕುಳಿತಲ್ಲಿ ರಕ್ತ ಮೆತ್ತಿ ಹೋಗಿದ್ದಾಳೆ. ಈಗ ಇದನ್ನೆಲ್ಲಾ ಸ್ವಚ್ಛ ಮಾಡುವ ಕರ್ಮ ನನಗೆ!"

ಇದ್ಯಾವುದನ್ನೂ ಕೇಳಿಸಿಕೊಳ್ಳದೆ 'ಕೆಂಪಿ' ತನ್ನ ಪಾಡಿಗೆ ಮುಂದೆ ಹೋದಳು. ಆದರೆ ಆ ಮನೆಯೊಳಗಿನಿಂದ ಯಾರೋ ಕಲ್ಲೆತ್ತಿ ಅವಳ ಮೇಲೆ ಬೀಸಿ ಒಗೆದರೆಂದು ಕಾಣುತ್ತದೆ. ಅವಳ ಬಾಯಿಂದ 'ನಿನ್ನ ಅಮ್ಮನ..' ಎನ್ನುವ ಮಾತು ಹೊರಟಿತು. ನಿಂತಲ್ಲಿಯೇ ಕುತ್ತಿಗೆ ಸವರುತ್ತಾ ಅವಳು ಕುಳಿತುಬಿಟ್ಟಳು. ನಂತರ ನಿಧಾನವಾಗಿ ಎದ್ದು ನಿಂತಳು. ಮುಖ ತಿರುಗಿಸಿ ಅಳುಧ್ವನಿಯಲ್ಲಿ ಶಪಿಸಿದಳು,

"ರಂ.. ಮಕ್ಕಳೇ ನಿಮಗೆ ಎಂದಿಗೂ ಒಳ್ಳೆಯದಾಗುವುದಿಲ್ಲ. ನನ್ನ ಮೇಲೆ ಕಲ್ಲು ಎಸೆಯುತ್ತೀರಲ್ಲ, ಏಳು ಜನ್ಮದವರೆಗೆ ವಿಲವಿಲನೆ ಒದ್ದಾಡಿ ಸಾಯ್ತೀರಿ ನೀವು, ನೋಡಿ ಬೇಕಾದ್ರೆ."

ಅವಳು ಬೆನ್ನು ಹಾಕಿ ನಿಂತಾಗ ನನ್ನ ದೃಷ್ಟಿ ಅವಳ ಪ್ರಷ್ಠ ಭಾಗದಲ್ಲಿರುವ ರಕ್ತದ ಕಲೆಗಳಿಗೆ ಅಂಟಿಕೊಂಡಿರುವ ಮರಳಿನ ಕಡೆಗೆ ಹರಿಯಿತು. ಅವಳಿಗೆ ಮೂಲವ್ಯಾಧಿ ರೋಗ ಇರುವ ಸಂಗತಿಯನ್ನು ನನ್ನ ಗೆಳೆಯರು ಹೇಳಿದ್ದು ನೆನಪಾಗಿ ವಾಂತಿ ಬಂದ ಹಾಗಾಯಿತು.

ಅವಳು ನಡೆದು ಬರುತ್ತಿದ್ದಂತೆ ಅವಳ ಕಣ್ಣಿಗೆ ಬೀಳುವುದು ಬೇಡವೆಂದು ನಾನು ಮುದುಕರೊಬ್ಬರ ನೆರಳಿನಲ್ಲಿ ದೇಹ ಅಡಗಿಸಿ ನಿಂತುಕೊಂಡೆ.

ನೆಲದಲ್ಲಿ ಕುಳಿತು ಹೋಮ್‌ವರ್ಕ್ ಮಾಡುತ್ತಿದ್ದವನು ಕಿಟಕಿಯಿಂದ ನೆರಳು ಕಂಡಿತೆಂದು ತಲೆ ಎತ್ತಿ ನೋಡಿದೆ. ಎದೆ ಧಸಕ್ಕೆಂದಿತು. ಹೊರಗೆ 'ಕೆಂಪಿ' ನಿಂತಿದ್ದಾಳೆ!

"ಸ್ವಲ್ಪ ಬಾಗಿಲು ತೆಗಿ ಮಗಾ"

ಕೆಂಪಿ ಇಲ್ಲಿಗೆ ಬರಬಹುದೆಂಬ ಭ್ರಮೆ ನನ್ನಲ್ಲಿ ಇದ್ದರೂ, ಅವಳ ಆಗಮನ ಅನಪೇಕ್ಷಿತವಾಗಿತ್ತು. ಅವಳು ಮನೆಮುಂದೆ ಕಾಣಿಸಿದರೆ ಏನು ಮಾಡುವುದೆಂದು ನಾನು ಯೋಚಿಸಿಯೇ ಇರಲಿಲ್ಲ. ದಿಗಿಲಿನಿಂದ ನಿಂತುಕೊಂಡೆ.

"ಬಾಗಿಲು ತೆಗೆಯೋ. ನೀನ್ಯಾಕೆ ಹೆದರುತ್ತಿ?"

"ನಾನು...ನಾನು.. ಅಮ್ಮನನ್ನು ಕರೆಯುತ್ತೇನೆ"

"ಸರಿ, ಹೋಗು ಕರಿ"

ನಾನು ಒಳಗಿನ ಕೋಣೆಗೆ ಹೋಗಿ ಅಮ್ಮನನ್ನು ಕರೆದೆ,

"ಅಮ್ಮಾ, ಅವಳು ಬಂದಿದ್ದಾಳೆ."

"ಅವಳೆಂದರೆ ಯಾರು?"

"ಆ ಮುದುಕಿ, 'ಕೆಂಪಿ' "

ಅಮ್ಮ ಹಣೆ ಮೇಲೆ ಬಡಿದುಕೊಂಡಳು.

"ಇಲ್ಲಿಗೂ ಬಂದು ಮುಟ್ಟಿದಳೇ?..ಏನು ಮಾಡಲಿ ದೇವರೇ! ನಾನು ಇಲ್ಲವೆಂದು ಹೇಳೋ"

"ನಾನು ನಿನ್ನನ್ನು ಕರೆಯುತ್ತೇನೆ ಎಂದು ಅವಳಿಗೆ ಹೇಳಿದ್ದೇನೆ"

"ನಾನು ಹೊರಗೆ ಹೋಗಿದ್ದೇನೆ ಎಂದು ಹೇಳಿಬಿಡು"

"ಅವಳು ಬಾಗಿಲು ತೆರೆಯಲು ಹೇಳ್ತಾಳೆ. ನಂತರ ನಾನೇನು ಮಾಡಲಿ?"

ಅಮ್ಮ ಗಂಭೀರಳಾಗಿ ಮುಂದಿನ ಬಾಗಿಲಿನತ್ತ ನಡೆದು ಕೇಳಿದಳು,

"ಏನು ಬೇಕು?"

"ಹೆಣ್ಣೇ, ಮನೆ ಹತ್ತಿರ ಬಂದವರಿಗೆ ಒಳಗೆ ಬಾ ಅಂತ ಹೇಳು"

"ನಿನಗೆ ಏನು ಬೇಕು?"

"ನೋಡೇ, ನನ್ನ ಗುರುತು ಸಿಗಲಿಲ್ಲವೇ ನಿನಗೆ? ಹೇಗೆ ಗುರುತಿಸಬೇಕು ಹೇಳು? ನನ್ನನ್ನು ನಿಮ್ಮ ಮದುವೆ ಸಮಯದಲ್ಲಿ ನೋಡಿರಬೇಕು ನೀನು. ಹತ್ತು ಹನ್ನೆರಡು ವರ್ಷ ಕಳೆಯಿತಲ್ಲ. ಅದಿರಲಿ.. ನೀನು ಹೇಗಿದ್ದಿ? ಗಿರಿ ಮನೆಯಲ್ಲಿ ಇಲ್ಲವೇ? ಅವನನ್ನು ಕರಿ. ದುರಪದ ದೊಡ್ಡಮ್ಮ ಬಂದಿದ್ದಾಳೆ ಎಂದು ಹೇಳು. ನನ್ನ ಕೈಯಿಂದ ಎತ್ತಿ ಅವನನ್ನು ಆಡಿಸಿದ್ದೇನೆ..ಈಗ ನೀವೆಲ್ಲರೂ ಬೆಳೆದಿದ್ದೀರಿ...ದೊಡ್ಡವರಾಗಿದ್ದೀರಿ. ಆದರೆ ಇವತ್ತಿಗೂ ನೀವೆಲ್ಲರೂ ನನ್ನ ಮಕ್ಕಳೇ"

"ನಿನಗೆ ಏನು ಬೇಕು ಹೇಳು?"

"ಸ್ವಲ್ಪ ನೀರು ಕೊಡು. ತಿರುಗಿ ತಿರುಗಿ ಸಾಕಾಗಿ ಹೋಗಿದೆ. ನಾಲ್ಕು ದಿನಗಳಾದವು ನಾನು ಸುತ್ತಾಡಿಕೊಂಡೇ ಇದ್ದೇನೆ. ಮನೆಗೆ ಹೋಗಲು ದಾರಿ ಸಿಗ್ತಾ ಇಲ್ಲ. ನನ್ನ ಮಗ ಇದ್ದಾನೆ ನೋಡು ರಾಕ್ಷಸ ಅವನು. ರಾತ್ರಿ ಕುಡಿದು ಬಂದು ನನಗೆ ಹೊಡೆಯುತ್ತಾನೆ. ಇನ್ನು ಅವನ ಹೆಂಡತಿ ನಡತೆ ಕೆಟ್ಟವಳು. ಅವಳ ವಿಷಯ ಏನೂ ಹೇಳಬೇಕಾಗಿಯೇ ಇಲ್ಲ. ಇಬ್ಬರೂ ಸೇರಿ ನನಗೆ ಮೋಸ ಮಾಡಿದ್ದಾರೆ. ನನ್ನ ಮನೆ, ತೋಟ ಎಲ್ಲಾ ತಮ್ಮ ಹೆಸರಿಗೆ ಮಾಡಿಕೊಂಡಿದ್ದಾರೆ. ನಾನು ಮುದಿ ಪ್ರಾಯದಲ್ಲಿ ಅವರಿಗೆ ಹೊರೆಯಾಗಿ ಹೋದೆ. ಎಷ್ಟು ಹೀನವಾಗಿ ನಡೆಸಿಕೊಳ್ಳುತ್ತಾರೆಂದರೆ ಹೇಳಿ ಪ್ರಯೋಜನವಿಲ್ಲ"

"ನೀನು ಯಾಕೆ ಅಲೆದಾಡುತ್ತಿ? ವಯಸ್ಸಾದವರಿಗೆ ಆಸರೆ ನೀಡುವ ಎಷ್ಟೊ ಮನೆಗಳು ಇವೆ. ಅಲ್ಲಿ ಎಲ್ಲಿಯಾದರೂ ಹೋಗಿ ಇದ್ದು ಬಿಡಬಹುದಲ್ಲ"

"ಹಾಗೆ ಎಲ್ಲಿಯಾದರೂ ಹೋಗಿ ಇರಲು ಆಗುತ್ತದೇನು? ಮತ್ತು ಹೀಗೆ ಎಲ್ಲಿಯಾದರೂ ಹೋಗಿ ಇರುವುದು ನಮ್ಮ ಮನೆತನಕ್ಕೆ ಶೋಭೆ ತರುವುದೇನು? ನೀನೇ ಹೇಳು.. ನಿನ್ನ ತಾಯಿ ತಂದೆ ಯಾವುದಾದರೂ ಅನಾಥಾಶ್ರಮಕ್ಕೆ ಹೋಗಿ ಇರುವುದು ನಿನಗೆ ಹಿಡಿಸುವುದೇ?"

ನನ್ನ ಅಮ್ಮ ನಿರುತ್ತರಳಾದಳು ಕೆಂಪಿ ಅನುನಯದ ಧ್ವನಿಯಿಂದ ಕೇಳಿದಳು–

"ನಾನು ಸ್ವಲ್ಪ ದಿನಗಳ ಮಟ್ಟಿಗೆ ಇಲ್ಲಿ ಇರಲೇನು?"

"ಇಲ್ಲಿ?! ಬೇಡ.. ಬೇಡ. ಇಲ್ಲಿ ಸರಿಯಾಗಲಾರದು."

"ಇದು ನೋಡು, ಕೆಂಪಿ 'ತನ್ನ ಮಾಸಿದ ಅರಿವೆಯ ಚೀಲವನ್ನು ತೆರೆದು ಅದರಿಂದ ಒಂದು ಸಣ್ಣ ಗಂಟನ್ನು ಎತ್ತಿಕೊಂಡಳು. ಅದರೊಳಗೆ ಹುಡುಕಾಡಿ ಚಿನ್ನದ ಒಡವೆಯೊಂದನ್ನು ತೆಗೆದು ತೋರಿಸಿದಳು."

"ಕಡಿಮೆ ಎಂದರೂ ಹತ್ತು ಹನ್ನೆರಡು ತೊಲೆ ಇರಬಹುದು. ಇದನ್ನು ನೀನು ಇಟ್ಟುಕೋ. ಬದಲಿಗೆ ನನಗೆ ಇಲ್ಲಿ ಇರಲು ಅವಕಾಶ ಮಾಡಿಕೊಡು. ನೀನು ಅನ್ನ, ಗಂಜಿನೀರು ಏನು ಬೇಕಾದರೂ ಕೊಡು. ಅದನ್ನು ಸೇವಿಸಿ ನನ್ನ ಉಳಿದ ದಿನಗಳನ್ನು ಕಳೆಯಬಲ್ಲೆ"

"ಏನೂ ಬೇಡ. ನಾವಿಬ್ಬರೂ ನೌಕರಿ ಮಾಡ್ತೇವೆ. ನಿನ್ನನ್ನು ನೋಡಿಕೊಳ್ಳಲು ಸಾಧ್ಯವಾಗದು. ನೀನು ಮತ್ತೆ ಎಲ್ಲಿಯಾದರೂ ಹೋಗಿ ವಿಚಾರಿಸು"

"ಹೆಣ್ಣೇ, ಏನೂ ಅಲ್ಲದಿದ್ದರೂ ನೀನು ನನ್ನ ಸಂಬಂಧಿ ಕಣೆ.."

"ನನಗೆ ಅದೆಲ್ಲಾ ಗೊತ್ತಿಲ್ಲ. ಇವರು ಇರುವಾಗ ಬಂದು ವಿಚಾರಿಸು ನೋಡೋಣ"

ನಾನು ಅಮ್ಮನ ಹಿಂದೆ ಕೈ ಹಿಸುಕುತ್ತಾ ನಿಂತುಕೊಂಡಿದ್ದೆ. ಈಗ ಕೆಂಪಿಯ ಅವತಾರ ಬದಲಾಗುತ್ತದೆ...ಅವಳ ಧ್ವನಿ ಬದಲಾಗುತ್ತದೆ.. ಅವಳ ಮಾತುಗಳು ಕಠಿಣವಾಗುತ್ತವೆ...ಅವಳ ಶಾಪದ ಸುರಿಮಳೆ ಆಗಲಿದೆ...

ಅಮ್ಮ ಒಳಗೆ ಹೋಗಿ ಅಡುಗೆ ಮನೆಯಲ್ಲಿ ಕುಳಿತಳು. ಸಮಯ ಬಹಳ ಕಳೆದರೂ, ಹೊರಗಿನಿಂದ ಬೈಗಳ ಧ್ವನಿ ಕೇಳಿ ಬರಲಿಲ್ಲವೆಂದು ನಾನು ಮೆಲ್ಲಗೆ ಕಿಟಕಿಯಿಂದ ಇಣಿಕಿ ನೋಡಿದೆ.

ಕೆಂಪಿ ಸಿಡಿಮಿಡಿಗುಟ್ಟುತ್ತಾ, ತಲೆ ಅಲ್ಲಾಡಿಸುತ್ತಾ, ನಿಧಾನವನ್ನು ನಡೆದು ಹೋಗುತ್ತಿದ್ದಾಳೆ. ಅವಳ ಸೀರೆಯ ಹಿಂಭಾಗದಲ್ಲಿ ಒಣಗಿದ ರಕ್ತ ಮತ್ತು ಕೊಳೆ ಮೆತ್ತಿಕೊಂಡು ಬೆಳೆದ ಕಪ್ಪು ಕಲೆ ಕಂಡಿತು.

ನನಗೆ ಅವಳ ಮುಖ ನೋಡಬೇಕೆಂಬ ಆಸೆ ಹುಟ್ಟಿತು. ಅವಳು ದುಃಖದಿಂದ ಅತ್ತಿರಬಹುದೇ? ಆದರೆ ಅವಳು ಹಿಂದೆ ತಿರುಗಿ ಕೂಡಾ ನೋಡದೆ ಮುಂದಿನ ಗೇಟನ್ನು ತೆರೆದಿಟ್ಟು ಹೊರಗೆ ಹೋದಳು.

ಮರುದಿನ ಬೆಳಿಗ್ಗೆ ಎದ್ದು ನಾನು ಹಲ್ಲುಜ್ಜುತ್ತಿದ್ದೆ. ತಂದೆಯವರು ಹಾಲು ತೆಗೆದುಕೊಂಡು ಬಂದವರೇ ಹೇಳತೊಡಗಿದರು,

"ನಮ್ಮ ಆ ದುರಪದ ದೊಡ್ಡಮ್ಮ ಇದ್ದಳಲ್ಲ.. ಅವಳು ಹೊಳೆಗೆ ಹಾರಿ ಜೀವ ಕಳೆದುಕೊಂಡಿದ್ದಾಳೆ. ವಿಚಾರಣೆ ನಡೆಸಲು ಪೋಲೀಸ್ ಬಂದಿದ್ದಾರೆ.."

ಅಮ್ಮನ ತುಟಿ ಕಂಪಿಸಲಾರಂಭಿಸಿತು.



# ಎರಡು ಧ್ರುವಗಳು

ಎಂಥಾ ಮಳೆ! ಒಂದೇಸವನೆ ಮುಸಲಧಾರೆಯಾಗಿ ಸುರಿಯುತ್ತಿದೆ. ರಾತ್ರಿ ಪ್ರಾರಂಭವಾದ ಮಳೆ ಇನ್ನೂ ನಿಂತಿಲ್ಲ. ಇದು ಹೀಗೆ ಮುಂದುವರಿದರೆ ಪ್ರವಾಹ ಬಂದು ಎಲ್ಲವೂ ಮುಳುಗಿ ಹೋಗಬಹುದೆಂದು ಕಾಣುತ್ತದೆ... ಮಳೆ ಒಮ್ಮೆ ಬಿಟ್ಟರೆ ಸಾಕಿತ್ತು. ಬಾಬು ಬರುವವನಿದ್ದಾನೆ... ಅವನು ಹೊಸ್ತಿಲ ಒಳಗೆ ಕಾಲಿಡದೆ ಮೂರು ವರ್ಷ ಕಳೆದಿವೆ! ಕಳೆದ ವರ್ಷ ಬರಬಹುದು, ಬರಬಹುದು ಅಂತ ಹೇಳಿದ್ದು ಮಾತ್ರ. ಆದರೆ ಬರಲೇ ಇಲ್ಲ. ಅದರ ಹಿಂದಿನ ವರ್ಷ ಕೂಡಾ ಹಾಗೆಯೇ. ಕೇಳಿದರೆ ಕೆಲಸ, ಕೆಲಸ ಅಂತ ಹೇಳ್ತಾನೆ. ರಜೆ ಸಿಗುವುದಿಲ್ಲವಂತೆ. ಜೀವ ಒತ್ತೆ ಇಟ್ಟು ಮಾಡುವ ಕೆಲಸ ಏನದು, ಯಾವ ಕಾರಣಕ್ಕಾಗಿ ರಜೆ ಸಿಗುವುದಿಲ್ಲ, ಆ ದೇವರಿಗೇ ಗೊತ್ತು!

ಅವನ ತಂದೆಯದು ಕೂಡಾ ಹೀಗೇ ನಡೆಯುತ್ತಿತ್ತು. ಬೆಳಿಗ್ಗೆ ಎದ್ದು ಹೋಗುವುದು. ಆಮೇಲೆ ಮನೆಗೆ ಬರುವಾಗ ರಾತ್ರಿ ಕಳೆಯುತ್ತಿತ್ತು. ಅದೇ ಬುದ್ಧಿ ಮಗನಿಗೂ ಬಂದಿದೆ. ಯಾವುದೇ ಕೆಲಸ ಕೈಗೆತ್ತಿಕೊಂಡರೂ, ಜೀವ ಒತ್ತೆ ಇಟ್ಟು ಅದನ್ನು ಮಾಡುವುದು. ಆಮೇಲೆ ಸುಧಾರಿಸಿಕೊಳ್ಳುವುದು. ಕಲಿಯುವಾಗಲೂ ಹಾಗೇ.. ಬೇರೆ ಮಕ್ಕಳು ಬೊಬ್ಬೆ ಹಾಕುತ್ತಾ, ದೊಡ್ಡ ಧ್ವನಿಯಿಂದ ಓದುತ್ತಿದ್ದರೆ, ಇವನು ಮಾತ್ರ ತನ್ನ ಮೇಜಿನ ಬಳಿ ಕುಳಿತು ಧ್ವನಿಯೆತ್ತದೆ ಏಕದಂ ತಲ್ಲೀನನಾಗಿ ಓದುತ್ತಿದ್ದ. ಆದರೆ ಕೈಬೆರಳಿನ ಉಗುರು ಕಚ್ಚುವ ಅಭ್ಯಾಸ ಅವನಿಗೆ. ಉಗುರು ಕಚ್ಚುತ್ತಾ ಕಟಕಟ ಸದ್ದು ಮಾಡುವುದು. ಅದು ಅವನಿಗೇ ಗೊತ್ತಾಗುತ್ತಿತ್ತೊ ಇಲ್ಲವೋ. ಆಗ ಅವಳು ತಿನ್ನಲು ಹುರಿದ ಕಡಲೆಯನ್ನೋ ಅಥವಾ ಇನ್ನೇನಾದರೂ ಕುರುಕಲು ತಿಂಡಿಯನ್ನೋ ನೀಡುತ್ತಿದ್ದಳು.

ಹೀಗೆ ಹೇಳುವಾಗ ನೆನಪಿಗೆ ಬರುತ್ತದೆ..ಬಾಬುವಿಗೆ ಶೆಟ್ಲಿ ಮತ್ತು ವಿಸೋಣು ಎಂದರೆ ಪಂಚಪ್ರಾಣ. ಬಂಗುಡೆಯ ವಾಸನೆ ಇಷ್ಟವಾಗುವುದಿಲ್ಲ. ಅವನು ಇವತ್ತು ಬರುವನೆಂದು ಮೀನು ಮಾರುವವಳಿಗೆ ಹೇಳಿದ್ದೆ. ಅವಳು ವಿಸೋಣು, ದೊಡ್ಡ ಶೆಟ್ಲಿ ಮತ್ತು ಏಡಿ ತಂದುಕೊಟ್ಟಿದ್ದಾಳೆ. ಮಧ್ಯಾಹ್ನದ ಊಟಕ್ಕೆ ಶೆಟ್ಲಿ ಹುರಿದು, ಏಡಿಯ ಪಲ್ಯ ಮಾಡುವುದು. ವಿಸೋಣು ರಾತ್ರಿ ಗಾಯಿತು.

ಶೆಟ್ಲೆ ಬಿಡಿಸಿ ಇಡಬೇಕು. ಜೊತೆಗೆ ಏಡಿಯನ್ನೂ ತೊಳೆದಿಡಬೇಕು. ತುಂಡು ಮಾಡಿ ಇಡಬಹುದು. ಆದರೆ ಕಣ್ಣು ಸರಿಯಾಗಿ ಕಾಣುವುದಿಲ್ಲವಲ್ಲ?.. ಕಣ್ಣಿಗೆ ಪೊರೆ ಬಂದು ನಾಲ್ಕು ವರ್ಷಗಳಾದವು. ಎಲ್ಲರೂ ಹೇಳ್ತಾರೆ, ಆಪರೇಶನ್ ಮಾಡು..ಆಪರೇಶನ್ ಮಾಡು ಅಂತ. ಹೇಳುವುದು ಸುಲಭ. ಆದರೆ ಅನುಭವಿಸುವುದು ಯಾರು? ಒಂದು ವೇಳೆ ಮಾಯನಿಗೆ ಆದ ಹಾಗೆ ಆದರೆ ಗತಿಯೇನು? ಅವಳ ಕಣ್ಣಿನಿಂದ ಮೋತಿಬಿಂದು ತೆಗೆಯಲು ಆಪರೇಶನ್ ಮಾಡಿದರು. ಗಾಯದಿಂದ ಪೊರೆ ಹೊರಬರಲಾರಂಭಿಸಿತು. ಮತ್ತೆ ಆಪರೇಶನ್ ಮಾಡಿದರು. ಆದರೆ ದೃಷ್ಟಿ ಹೋಯಿತು. ಆಮೇಲೆ ಸಾಯುವವರೆಗೆ ತಡಕಾಡುತ್ತಾ ತಿರುಗಾಡಿದಳು. ಹಾಗೆ ಕುರುಡಿಯಾಗಿ ಬದುಕುವ ಇಚ್ಛೆ ನನಗಿಲ್ಲ. ಹಾಗೇನೂ ಆಗುವುದಿಲ್ಲವೆಂದು ಬಾಬು ಹೇಳ್ತಿದ್ದ. ಅಪ್ಪನಿಗೆ ಆಪರೇಶನ್ ಮಾಡಿಲ್ವಾ? ಏನಾದರೂ ಕೆಡುಕಾಯ್ತಾ? ಅವನು ಹಣ ಕೂಡಾ ಕಳುಹಿಸಿದ. ಒಂದಲ್ಲ, ಎರಡು ಸಲ ವೈದ್ಯರನ್ನು ಕಂಡದ್ದೂ ಆಯ್ತು. ಅವರು ತಪಾಸಣೆ ಮಾಡಿ ರಕ್ತದ ಒತ್ತಡ ಇದೆ, ಸ್ವಲ್ಪ ದಿನ ಬಿಟ್ಟು ಬನ್ನಿ, ಅಲ್ಲಿಯವರೆಗೆ ಮಾತ್ರೆ ತೆಗೆದುಕೊಳ್ಳಿ ಅಂತ ಹೇಳಿ ಮಾತ್ರೆಯ ಹೆಸರು ಬರೆದುಕೊಟ್ಟರು. ಮತ್ತೆ ವೈದ್ಯರನ್ನು ಕಾಣುವ ದಿನ ಹತ್ತಿರಬಂದಾಗ ಜ್ವರ ಬಂತು. ಇದೇ ರೀತಿ ಎರಡು ಮೂರು ಸಲ ಆಗಿ ಜೀವಕ್ಕೆ ಬೇಸರ ಹಿಡಿದು ಹೋಯಿತು. ಹಾಳಾಗಿ ಹೋಗಲಿ! ಆಪರೇಶನೂ ಬೇಡ ವೈದ್ಯರೂ ಬೇಡ.. ಹಣ ಬ್ಯಾಂಕಿನಲ್ಲಿಯೇ ಉಳಿಯಿತು. ಅಲ್ಲೇ ಇರಲಿ! ಎಲ್ಲಾ ದೇವರ ಇಚ್ಛೆ...

ಮನೆ ಕೆಲಸಕ್ಕೆ ಒಬ್ಬ ಹೆಣ್ಣಾಳು ಸಿಕ್ಕಿದ್ದು ಒಳ್ಳೆಯದಾಯಿತು. ಈಗಿನ ಕಾಲದಲ್ಲಿ ಕೆಲಸದವರು ಎಲ್ಲಿ ಸಿಕ್ತಾರೆ? ಹುಡುಗಿಯರೆಲ್ಲಾ ಕಲಿಯಲು ಹೋಗ್ತಾರೆ. ಕಲಿತ ಹುಡುಗಿಯರು ಬೇರೆಯವರ ಮನೆಗೆಲಸಕ್ಕೆ ಹೋಗುವುದುಂಟೇ. ಪುಣ್ಯವಶಾತ್ ಇವಳೊಬ್ಬಳು ಸಿಕ್ಕಿದ್ದಾಳೆ. ಕೆಲಸ ಚೆನ್ನಾಗಿ ಮಾಡ್ತಾಳೆ. ಏನೇ ಹೇಳಿದರೂ ಸಟಸಟನೆ ಮಾಡಿ ಮುಗಿಸ್ತಾಳೆ.

"ಹೆಣ್ಣೇ, ಶೆಟ್ಲೆ ಬಿಡಿಸಿ ಆಯ್ತಾ? ಏಡಿಯನ್ನೂ ತೊಳೆದಿಡು ಆಂ?"

ಕಣ್ಣಿನಲ್ಲಿ ಮಸುಕಾದ ಚಿತ್ರ ಮೂಡಿತು. ಒಂದಲ್ಲ ಎರಡು. ಯಾರೋ ಇಬ್ಬರು ಬಂದಿರುವ ಹಾಗಿದೆ. ಬಾಬು ಮತ್ತು ಅವನ ಹೆಂಡತಿ ಇರಬಹುದೇ? ದೂರದಿಂದ ಏನೂ ಕಾಣಿಸುವುದಿಲ್ಲ. ಹತ್ತಿರ ಹೋಗಬೇಕು.

"ಯಾರು?"

ಹತ್ತಿರ ಹೋದಾಗ ತಿಳಿಯಿತು – ದೊಡ್ಡಮಗಳು. ಅವಳು ಇರುವುದು ಹದಿನಾಲ್ಕು ಮೈಲಿ ದೂರದ ಊರಿನಲ್ಲಿ. ಬಾಬು ಬರುವನೆಂದು ನಾನೇ ಹೇಳಿಕಳುಹಿಸಿದ್ದೆ–

"ಶಾಂತ ಅಲ್ವಾ? ಬಾಬು ಬಂದು ಮುಟ್ಟಿರಬಹುದು ಅಂತ ಅಂದುಕೊಂಡೆ"

ಅವಳು ನಗುತ್ತಾಳೆ. ಅವಳ ತುಟಿಗಳು ಕಂಪಿಸುತ್ತಿವೆ. ಏನೋ ಹೇಳುತ್ತಿರುವ ಹಾಗಿದೆ. ದರಿದ್ರ ಕಿವಿಗಳು. ಅವಳ ತುಟಿಯ ಹತ್ತಿರ ಹೋದರೆ ಮಾತ್ರ ಕೇಳಬಹುದು.

"ಏನೋ ಹೇಳಿದೆಯಲ್ಲ?"

"ನಿನಗೆ ಬಾಬೂವಿನದೇ ಚಿಂತೆ, ನಮ್ಮದು ಇಲ್ಲ"

"ಹಾಗೇನಿಲ್ಲ. ಎಲ್ಲಿ ನಿನ್ನ ಗಂಡ?"

"ಮಧ್ಯಾಹ್ನ ಬರಬಹುದು."

"ಇನ್ನು ಯಾರು ಬಂದಿದ್ದಾರೆ, ಮಗನೋ ಮಗಳೋ?"

"ಮಗ ಬಂದಿದ್ದಾನೆ. ಪಪ್ಪನ ಬಳಿ ಇದ್ದಾನೆ ನೋಡು"

ಹೌದಲ್ಲ. ಹುಡುಗ ಎತ್ತರವಿದ್ದಾನೆ. ತೆಂಗಿನ ಮರದ ಹಾಗೆ ತೆಳು, ಉದ್ದ. ನಾನು ಶಾಂತಾಳನ್ನು ವಿಚಾರಿಸಿದೆ,

"ಯಾಕಮ್ಮಾ ಹೀಗೆ, ಮಗು ಹೊಟ್ಟೆಗೆ ಏನೂ ತಿನ್ನುದಿಲ್ವಾ? ಕೈಕಾಲು ನೋಡು ಕಡ್ಡಿಯ ಹಾಗೆ ಆಗಿಬಿಟ್ಟಿವೆ"

"ಅವನನ್ನೇ ಕೇಳು. ತಟ್ಟೆಯಲ್ಲಿ ಬಡಿಸಿದ್ದು ಅವನಿಗೆ ಬೇಡ. ಬೆಳಿಗ್ಗೆ ಸಂಜೆ ಮ್ಯಾಗಿ ನೂಡಲ್ಸ್ ತೆಗೆದುಕೊಂಡು ತಿನ್ನುತ್ತಾನೆ. ಚಹಾ ಕಾಫಿ ಬೇಡವೆಂದರೆ ಬಿಟ್ಟುಬಿಡೋಣ. ಆದರೆ ಹಾಲು ಕೂಡಾ ಕುಡಿಯುವುದಿಲ್ಲ. ಹಾಲಿಗೆ ಬೂಸ್ಟ್, ಮಾಲ್ಟ್ ಎಲ್ಲಾ ಹಾಕಿ ನೋಡಿಯಾಯಿತು. ಅದೆಲ್ಲಾ ಸ್ವಲ್ಪ ದಿನ ಕುಡಿದು ಆಮೇಲೆ ಬೇಡ ಅಂತ ಬಿಡ್ತಾನೆ. "

ಈಗಿನ ಮಕ್ಕಳ ಬುದ್ಧಿ ಏನೆಂದು ಗೊತ್ತಾಗುವುದಿಲ್ಲ. ಅವರಿಗೆ ತಿಂಡಿ, ಊಟ ಮಾತ್ರ ಬೇಡ! ಸಣ್ಣವನಿರುವಾಗ ಬಾಬು ಕೂಡ ಹೀಗೇ ಮಾಡುತ್ತಿದ್ದ. ಹಾಲು ಬಿಸಿ ಇದ್ದರೆ ಕುಡಿಯುತ್ತಿರಲಿಲ್ಲ. ಆಮೇಲೆ ಅದು ತಣ್ಣಗಾಗಿ ಕೆನೆಕಟ್ಟಿ, ಕುಡಿಯುವ ಹೊತ್ತಿಗೆ ಕೆನೆ ಬಾಯಿಗೆ ಬಂತೂ ಅಂದರೆ ವಾಂತಿ ಮಾಡಿಬಿಡುವುದು. ಆದರೆ ದೂರ ಹೋಗಿ ಕಲಿಯಲು ಶುರು ಮಾಡಿದ ಬಳಿಕ ಎಲ್ಲಾ ಬದಲಾಯಿತು...

"ಮಗಳನ್ನು ಕರೆದುಕೊಂಡು ಬರಲಿಲ್ಲವಾ?"

"ಕರೆದುಕೊಂಡು ಬರಲು ಅವಳೇನು ಸಣ್ಣಮಗುವೇ? ಕಾಲೇಜಿನಲ್ಲಿ ಓದುತ್ತಿದ್ದಾಳೆ. ನಾಲ್ಕೈದು ತಿಂಗಳಲ್ಲಿ ಓದೂ ಮುಗಿಯುತ್ತೆ."

"ಆಮೇಲೆ?"

"ಆಮೇಲಿನದು ಆಮೇಲೆ ನೋಡಿದರಾಯಿತು."

"ಹಾಗಲ್ಲ, ಅವಳ ಭವಿಷ್ಯದ ಕುರಿತು ಆಲೋಚಿಸುವುದು ಬೇಡವೇ?"

"ಹುಂ"

"ಹೇಗೂ ಬಾಬು ಬರ್ತಾನಲ್ಲ, ಅವನನ್ನು ವಿಚಾರಿಸಿ ನೋಡೋಣ. ಎಲ್ಲಿಯಾದರೂ ಒಂದು ಒಳ್ಳೇ ಕೆಲಸ ಹುಡುಕಿ...ನಿನ್ನ ಕುತ್ತಿಗೆ ಸರ ಏನಾಯಿತೇ ಶಾಂತೂ?"

"ಅದೂ.."

"ಅವನು ಅದನ್ನೂ ಕೊಂಡುಹೋಗಿ ಮಾರಿದ್ನಾ?"

"ಇಲ್ಲ ಇಲ್ಲ ಮಾರಿಲ್ಲ. ಅಡವಿಟ್ಟಿದ್ದಾರೆ. ನಾನೇ ತೆಗೆದುಕೊಟ್ಟೆ. ವ್ಯಾಪಾರ ತುಂಬಾ ಡಲ್ ಆಗಿದೆಯಂತೆ. ಹೇಗಾದರೂ ದಿನ ಕಳೆಯಬೇಕಲ್ಲ?"

ಪಾಪ ನಿನ್ನ ಹಣೆಬರಹವೇ! ಅನುಭವಿಸಿ ಮುಗಿಯುವಂತಹದಲ್ಲ. ಹೊರಗಿನಿಂದ ಯಾರೋ ಬಂದ ಹಾಗಿದೆ?

"ಯಾರದು?"

"ದೇವಕ್ಕ"

"ದೇವಕೀ, ಬಾ ಇಲ್ಲಿ. ನೀನು ಬಂದು ಬಹಳ ದಿನ ಆಯ್ತಲ್ಲ? "

"ಗೊತ್ತು. ಒಂದೆರಡು ಸಲ ಬರಬೇಕೆಂದೇ ಹೊರಟಿದ್ದೆ. ಕಾಲು ನೋವು ಶುರುವಾಯಿತು ನೋಡು. ಕಂಬಳಿ ಹೊದ್ದು ಸುಮ್ಮನೆ ಮಲಗುವಾ ಅನ್ನಿಸಿತು"

"ಮಳೆಗಾಲದ ದಿನಗಳು. ಜಾಗ್ರತೆಯಿಂದ ಇರಬೇಕು, ಆಂ?"

"ಚೆನ್ನಾಗಿದ್ದಿಯಾ ಶಾಂತೂ?"

"ಹುಂ. ದೇವರ ದಯೆಯಿಂದ."

"ಯಾವಾಗ ಬಂದೆ?"

"ಈಗ ತಾನೇ ಬಂದೆ"

"ದೇವಕಿ, ಇವತ್ತು ಬಾಬೂ ಬರ್ತಾನೆ"

"ಯಾವಾಗ?"

"ಇನ್ನೇನು ಬರಬಹುದು. ಕೆಲಸದವಳು ಏನು ಮಾಡಿದ್ದಾಳೋ ಗೊತ್ತಿಲ್ಲ. ನಾನು ಹೋಗಿ ನೋಡಿ ಬರ್ತೇನೆ"

"ನಡಿ, ನಾನೂ ಬರ್ತೀನಿ. ಅಲ್ಲೇ ಕೂತು ಮಾತನಾಡೋಣ"

* * *

ಸ್ವಲ್ಪ ಹೊತ್ತಿನ ಮುಂಚೆ ದೊಡ್ಡ ಹುಯಿಲನ್ನೇ ಎಬ್ಬಿಸಿದ ಮನೆ ಈಗ ಜಾತ್ರೆ ಮುಗಿದ ದೇವಾಲಯದ ಆವರಣದ ಹಾಗಿದೆ. ತಿನ್ನಲು ಬರುವಂತಿದೆ.

ಬಾಬು ಮತ್ತು ಅವನ ತಂದೆಯ ದೊಡ್ಡ ನಗು, ಅವನ ಹೆಂಡತಿ ಮತ್ತು ಶಾಂತಾಳ ಉತ್ಸಾಹ ತುಂಬಿದ ಮಾತುಕತೆ, ಮಕ್ಕಳ ಆಟ ಮತ್ತು ಕಿರಿಚಾಟ. ಮೂರು ವರ್ಷಗಳ ಬಳಿಕ ಎಲ್ಲರನ್ನು ಒಟ್ಟಿಗೇ ನೋಡುವ ಅವಕಾಶ.

ಅಪ್ಪ ಮತ್ತು ಮಗ ಕೂತದ್ದು ಮುಂದಿನ ಕೋಣೆಯಲ್ಲಿ. ಬಾಬು ತುಂಬಾ ಮಾತನಾಡುತ್ತಿದ್ದ. ಇವರಿಗಂತೂ ಮೊದಲಿನಿಂದಲೂ ಹಾಗೇ. ಮಾತು ಜಾಸ್ತಿ. ಮೂರು ವರ್ಷಗಳ ಸುದ್ದಿಯಲ್ಲವೇ? ಮಾತನಾಡಿ ಮುಗಿಯುವುದೇ ಇಲ್ಲ ಎನ್ನುವ ಹಾಗೆ ಕಂಡಿತು. ಊಟಕ್ಕೆ ನಾಲ್ಕಾರು ಬಾರಿ ಕರೆಯಬೇಕಾಯಿತು. ಊಟ ಮಾಡುವಾಗಲೂ ಮಾತನಾಡುತ್ತಲೇ ಇದ್ದರು.

ಮೂರು ವರ್ಷಗಳ ನಂತರ...ಅದೂ ಎಷ್ಟು ದೂರದಿಂದ ಬಂದಿದ್ದಾರೆ! ಕಡಿಮೆ ಎಂದರೆ ಎರಡು ದಿನ ನಿಲ್ಲಬಹುದೆಂದು ಎಣಿಸಿದ್ದೆ. ಆದರೆ ಕಣ್ಣು ತುಂಬಾ ನೋಡಲು ಕೂಡಾ ಸಿಗಲಿಲ್ಲ. ಊಟವಾದ ನಂತರ ತಾಸಿನಷ್ಟು ಕಾಲ ಇದ್ದರು. ನಂತರ ಎದ್ದು ಹೊರಟರು. ಉಂಡದ್ದು ಗಂಟಲಲ್ಲಿ ಇಳಿದಿದೆಯೋ ಇಲ್ಲವೋ. ತಕ್ಷಣ ಹೊರಟೇ ಬಿಟ್ಟರು.

ಐನೂರು ಕಿಲೋಮೀಟರ್ ದೂರದಲ್ಲಿ ಯಾರನ್ನೋ, ಎಲ್ಲಿಯೋ ಭೇಟಿಯಾಗುವುದು ಇದೆಯಂತೆ. ಸಮಯಕ್ಕೆ ಸರಿಯಾಗಿ ರೈಲು ಹಿಡಿಯುವುದಿದೆಯಂತೆ. ಎದ್ದರು ಮತ್ತು ಹೋದರು.

ಮಕ್ಕಳ ಈ ಸಂಸಾರ ಯಾವ ರೀತಿಯದೋ ಗೊತ್ತೇ ಆಗುವುದಿಲ್ಲ. ಸೊಸೆ ಹೇಳಿದ್ದು. ಬಾಬು ಬೆಳಿಗ್ಗೆ ಎದ್ದು ಹೋದವನು ಮನೆಗೆ ಹಿಂತಿರುಗುವಾಗ ರಾತ್ರಿ ಹತ್ತೋ ಹನ್ನೊಂದೋ ಗಂಟೆ ಆಗುತ್ತದೆ, ಭಾನುವಾರ ಕೂಡ ಮನೆಯಲ್ಲಿ ಇರುವುದಿಲ್ಲ, ಹಲ್ಲುಜ್ಜುವಾಗ, ತಿಂಡಿ ತಿನ್ನುವಾಗಲೂ ಕೈಯಲ್ಲಿ ವೃತ್ತಪತ್ರಿಕೆ ಹಿಡಿದು ಕುಳಿತುಕೊಳ್ಳುತ್ತಾನೆ. ಜೀವನವೆಂದರೆ ಹೀಗೇನು?

ಒಂದು ಒಳ್ಳೆಯದಾಯಿತು. ಶಾಂತಾಗೆ ಅವರೊಂದಿಗೆ ಮಾತನಾಡುವ ಅವಕಾಶವಾದರೂ ಸಿಕ್ಕಿತು. ಅವಳ ಮಗಳ ಕೆಲಸದ ವ್ಯವಸ್ಥೆ ಮಾಡುತ್ತೇನೆಂದು ಬಾಬು ಹೇಳಿದನಂತೆ. ದೇವಕಿ ಕೂಡಾ ತಾನು ಅವನೊಂದಿಗೆ ಮಾತನಾಡಿದೆ ಎಂದಳು.

ನನ್ನ ಬಳಿ ಮಾತ್ರ ಮಾತನಾಡಲು ಬರಲೇ ಇಲ್ಲ. ಊಟಕ್ಕೆ ಕುಳಿತಾಗ ಒಂದೆರಡು ಮಾತು ಆಡಿದ, ಅಷ್ಟೇ. ಅದಕ್ಕೆ ಉತ್ತರ ಕೊಡುವ ಮೊದಲೇ ಬೇರೆ ಯಾರೋ ಮಾತನಾಡಿದರು. ಅವನೊಂದಿಗೆ ಮನಬಿಚ್ಚಿ ಮಾತನಾಡಲು ಆಗಲೇ ಇಲ್ಲ. ಅವನಾದರೂ ಯಾಕೆ ಮಾತನಾಡಲಿಲ್ಲ? ನೀನು ಹೇಗಿದ್ದಿ, ಆರೋಗ್ಯ ಹೇಗಿದೆ ಏನೂ ವಿಚಾರಿಸಲೇ ಇಲ್ವಲ್ಲಾ? ಅವನು ಕೇಳಿರಬಹುದೇನೋ, ನನಗೇ ಅದು ಕೇಳಿಸದೇ ಹೋಗಿರಬೇಕು. ಮನಸ್ಸಿಗೆ ಕೆಟ್ಟದೆನಿಸುತ್ತದೆ. ಆದರೆ ಕಿವಿಯದು ಹೇಳಲಿಕ್ಕೆ ಆಗುವುದಿಲ್ಲ...ಹೌದು, ಅವನು ನನ್ನನ್ನು ನೋಡುತ್ತಾ ಕುಳಿತಿದ್ದ. ಅವನ ತುಟಿ ಅಲುಗಾಡುತ್ತಿತ್ತು. ಏನೋ ಕೇಳಿದನೆಂದು ಕಾಣುತ್ತೆ. ದರಿದ್ರ ಕಿವಿ..ದರಿದ್ರ ಕಿವಿಗಳು..

ಆದರೂ ಒಳಗೆ ಎಲ್ಲೋ ಚುಚ್ಚುತ್ತಿದೆ..



# ಸಂಬಂಧ

ಚಪ್ಪರದ ಮುಖ್ಯದ್ವಾರದ ಬಳಿ ಇಬ್ಬರು ಹುಡುಗಿಯರು ನಿಂತುಕೊಂಡಿದ್ದಾರೆ. ಅವರ ಕೈಗಳಲ್ಲಿ ಹೂ ಮತ್ತು ಪನ್ನೀರುದಾನಿ ಇದೆ. ಅವರು ಒಳಗೆ ಬರುವ ಅತಿಥಿಗಳ ಮೇಲೆ ಪನ್ನೀರು ಸಿಂಪಡಿಸುತ್ತಿದ್ದಾರೆ. ಪನ್ನೀರಿನ ಸಿಂಚನ ಸವಿಯಲು ಮಕ್ಕಳ ಗುಂಪೇ ಅಲ್ಲಿ ನೆರೆದಿದೆ.

ಅವನು ಹತ್ತಿರ ಬರುವುದನ್ನು ನೋಡಿ ಆ ಹುಡುಗಿ ಪನ್ನೀರು ಚಿಮುಕಿಸಿದಳು. ಬಿಸಿಲಲ್ಲಿ ಬಂದವನಿಗೆ ಪರಿಮಳದ ನೀರಹನಿಗಳ ಸ್ಪರ್ಶ ಇಡೀ ದೇಹಕ್ಕೆ ತಂಪಿನ ಅನುಭವ ನೀಡಿತು.

ಒಳಗೆ ಹೋಗುವುದೊ, ಬೇಡವೋ? ಆತ ಯೋಚಿಸತೊಡಗಿದ. ಇಲ್ಲಿಯೇ ನಿಂತರೆ ಒಳ್ಳೆಯದು. ಚಪ್ಪರದೊಳಗೆ ಎಲ್ಲೆಲ್ಲಿ ಏನೇನು ನಡೆಯುತ್ತದೆ ಎಲ್ಲವೂ ಕಾಣಸಿಗುತ್ತದೆ. ಹಾಗೆಂದು ದ್ವಾರದಲ್ಲಿ ನಿಲ್ಲಲು ಯಾರು ಬಿಡ್ತಾರೆ? ಒಳಗೆ ಕುರ್ಚಿ ಖಾಲಿ ಇವೆ. ಯಾರಾದರೂ ಬಂದು ಒಳಗೆ ಕುಳಿತುಕೊಳ್ಳುವಂತೆ ಹೇಳಬಹುದು. ಆಗ ಬೇಡವೆನ್ನಲು ಸಾಧ್ಯವಾಗದು. ಒಳಗೆ ಹೋಗಿ ಕುಳಿತುಕೊಳ್ಳುವುದೇ ವಾಸಿ.

ಮದುವೆ ಮಂಟಪದಲ್ಲಿ ಅಂತರಪಟದ ಎರಡೂ ಬದಿಗಳಲ್ಲಿ ಮದುಮಗ ಮತ್ತು ಮದುಮಗಳು ಪರಸ್ಪರ ಮುಖ ಮಾಡಿ ನಿಂತಿದ್ದಾರೆ. ಮದುಮಗಳು ಮಂಟಪಕ್ಕೆ ಬೆನ್ನು ಹಾಕಿ ನಿಂತಿದ್ದರಿಂದ ಅವಳ ಮುಖ ಕಾಣಿಸ್ತಾ ಇಲ್ಲ. ಮದುಮಗ ಅಂತರಪಟದ ಆಚೆ ಮರೆಯಾಗಿದ್ದಾನೆ. ಪುರೋಹಿತರು ಮಂತ್ರೋಚ್ಚಾರ ಮಾಡುತ್ತಿದ್ದಾರೆ. ಚಪ್ಪರದ ಇನ್ನೊಂದು ಮೂಲೆಯಲ್ಲಿ ವಾದ್ಯದವರು ವಾದ್ಯ ನುಡಿಸುತ್ತಿದ್ದಾರೆ. ಅನಾಥ ಮಕ್ಕಳ ಅಳುವಿನ ಹಾಗೆ ಅವರ ಸಂಗೀತಕ್ಕೆ ಯಾರೂ ಗಮನ ನೀಡುತ್ತಿಲ್ಲ.

ಮೊದಲ ಸಾಲಿನ ಕುರ್ಚಿಗಳಲ್ಲಿ ಮಹಿಳೆಯರು ಕೂತಿದ್ದಾರೆ. ಹಿಂದಿನ ಸಾಲಿನಲ್ಲಿ ಅಲ್ಲೊಂದು ಇಲ್ಲೊಂದು ಗಂಡಸರ ಗುಂಪುಗಳು. ಹೊಸ ಬಟ್ಟೆಯುಟ್ಟ ಮಕ್ಕಳು ಕುರ್ಚಿಗಳ ಸುತ್ತಲೂ ಮುಟ್ಟಾಟ ಆಡುತ್ತಿದ್ದಾರೆ. ಹೊಸ ಶೈಲಿಯ ಉಡುಪು ಧರಿಸಿದ ಹುಡುಗಿಯರು ಜಾಗ್ರತೆಯಿಂದ ನಿಧಾನವಾಗಿ

ಅತ್ತ ಇತ್ತ ಸುಳಿದಾಡುತ್ತಿದ್ದಾರೆ. ಎಲ್ಲರೂ ನಗುನಗುತ್ತಾ ಮಾತನಾಡುತ್ತಿದ್ದಾರೆ. ಪುರೋಹಿತರ ಮಂತ್ರ ಮತ್ತು ವಾದ್ಯದವರ ಸಂಗೀತ ಹೆಂಗಸರ, ಮಕ್ಕಳ ಓಡಾಟವಲ್ಲಿ, ಗಂಡಸರ ದೊಡ್ಡ ನಗುವಿನಲ್ಲಿ ಅಡಗಿಹೋಗಿದೆ.

ಅವನು ಸುತ್ತಲೂ ದೃಷ್ಟಿ ಓಡಿಸಿದ. ಪರಿಚಿತರು ಯಾರೂ ಕಣ್ಣಿಗೆ ಬೀಳಲಿಲ್ಲ. ಹೋಗಿ ಒಂದು ಕುರ್ಚಿಯಲ್ಲಿ ಕುಳಿತುಕೊಂಡ. ಹತ್ತಿರ ಯಾರೂ ಇರಲಿಲ್ಲ. ಪತ್ರಿಕೆ ತಂದದ್ದು ಒಳ್ಳೆಯದೇ ಆಯಿತು. ಸಮಯವಾದರೂ ಕಳೆಯುತ್ತದೆ ಎಂದುಕೊಂಡು ಪತ್ರಿಕೆ ಬಿಡಿಸಿದ.

ಮಂತ್ರಿಮಂಡಲದ ಪುಡಾರಿಗಳ ಮೇಲೆ ಪ್ರಶ್ನಾಚಿಹ್ನೆ ಇರುವ ಮುಖ್ಯ ವರದಿ. ಆಮೇಲೆ ಕಾಶ್ಮೀರದಲ್ಲಿ ಏಳು ಜನರ ಮರಣ. ನರ್ಮದಾ ಬಚಾವೊ ಆಂದೋಲನದ ವತಿಯಿಂದ ಕೆಲವರ ಉಪವಾಸ.. ಅಮೇರಿಕ ಮತ್ತು ರಶ್ಯಾದ ನಡುವೆ..

ಎರಡನೆಯ ಪುಟವಿಡೀ ಜಾಹೀರಾತು. ಬಿಡು. ಮೂರನೆಯ ಪುಟದಲ್ಲಿ ಸಾಮಾನ್ಯ ಜನರ ಅಭಿರುಚಿಗೆ ತಕ್ಕುದಾದ ಪ್ರಾದೇಶಿಕ ಸುದ್ದಿಗಳು...ಒಬ್ಬ ಮಹಿಳೆ ಮತ್ತು ಅವಳ ಇಬ್ಬರು ಮಕ್ಕಳು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಗಂಡ ಕುಡುಕ. ಯಾವಾಗಲೂ ಮನೆಗೆ ಬಂದು ಹೆಂಡತಿಗೆ ಹೊಡೆಯುತ್ತಿದ್ದನಂತೆ... ಅವರ ಆತ್ಮಕ್ಕೆ ಶಾಂತಿ ಸಿಗಲಿ.

ಮೂವತ್ತೆರಡು ವರ್ಷ ಪ್ರಾಯದ ಒಬ್ಬ ಮಹಿಳೆ ಗಂಡ-ಮಕ್ಕಳನ್ನು ಬಿಟ್ಟು ಹದಿನಾರು-ಹದಿನೇಳು ವರ್ಷ ವಯಸ್ಸಿನ ಹುಡುಗನೊಂದಿಗೆ ಓಡಿಹೋಗಿದ್ದಾಳೆ! ತನ್ನನ್ನು ಹುಡುಕುವ ಪ್ರಯತ್ನ ಮಾಡುವುದು ಬೇಡ, ನಿಮ್ಮ ಪತ್ನಿ ತನ್ನ ಪ್ರಿಯಕರನೊಂದಿಗೆ ಸುಖವಾಗಿದ್ದಾಳೆ ಎಂದು ಗಂಡನಿಗೆ...

ಉತ್ತರ ಪ್ರದೇಶದಲ್ಲಿ ಒಬ್ಬ ಆರು ವರ್ಷದ ಬಾಲಕಿಯ ಮೇಲೆ ಅವಳ ತಂದೆಯಿಂದ ಅತ್ಯಾಚಾರ! ಮೊದಲು ಅವನು ಹೊಡೆದು ಬಡಿದು ಕೆಲಸ ಸಾಧಿಸುವ ಪ್ರಯತ್ನ ನಡೆಸಿದನಂತೆ. ಆದರೆ ಅವಳ ಪ್ರತಿರೋಧದಿಂದ ಅದು ಸಾಧ್ಯವಾಗಲಿಲ್ಲ. ಆಮೇಲೆ ಅವಳನ್ನು ಸಿಹಿ ಮಾತುಗಳೊಂದಿಗೆ ಹೊಲಕ್ಕೆ ಕರೆದುಕೊಂಡು ಹೋಗಿ ಅತ್ಯಾಚಾರವೆಸಗಿ, ನಂತರ ಅವಳ ಕುತ್ತಿಗೆ ಹಿಚುಕಿ ಕೊಂದು ಹೂಳಿದ. ಪೊಲೀಸರು ವಿಚಾರಣೆ ನಡೆಸಿದರು. ಆಗ ಅವನ

ಸಂಯಮ ತಪ್ಪಿತು. ಆತ ತನ್ನ ಅಪರಾಧವನ್ನು ಒಪ್ಪಿಕೊಂಡ. ಅವನು ತೋರಿಸಿದ ಜಾಗದಲ್ಲಿ ಹೂಳಿಟ್ಟ ಶವ ಸಿಕ್ಕಿತು...

ಅವನಿಗೆ ಯಾವುದೋ ಮಗುವಿನ ಅಳುಧ್ವನಿ ಹತ್ತಿರದಲ್ಲಿಯೇ ಕೇಳಿಸಿದಂತಾಯಿತು. ಅವನು ಪತ್ರಿಕೆಯ ಮೇಲಿಂದ ದೃಷ್ಟಿ ಹಾಯಿಸಿ ನೋಡಿದ. ಚಪ್ಪರದಲ್ಲಿರುವ ಜನರ ಸಂಖ್ಯೆ ಹೆಚ್ಚಾಗಿದೆ. ಖಾಲಿ ಕುರ್ಚಿ ಕಾಣಿಸುತ್ತಿಲ್ಲ. ಬಲಬದಿಯಲ್ಲಿ ದಪ್ಪ ಶರೀರದ ಮುದುಕನೊಬ್ಬ ಕುಳಿತಿದ್ದಾನೆ. ಎಡಬದಿಯಲ್ಲಿ ಇಬ್ಬರು ಸಣ್ಣಮಕ್ಕಳು. ಮುಂದೆ ಒಬ್ಬ ಮಹಿಳೆ. ಹಿಂದಿನಿಂದ ಅವಳ ವಯಸ್ಸು ಗೊತ್ತಾಗಲಿಲ್ಲ. ಅವಳ ಹತ್ತಿರ ಮೂರು ನಾಲ್ಕು ವರ್ಷದ ಒಬ್ಬ ಹುಡುಗಿ ನಿಂತಿದ್ದಾಳೆ.

ಅವನ ಕಣ್ಣುಗಳು ಆ ಹುಡುಗಿಯ ಮೇಲೆ ಸ್ಥಿರವಾದವು. ಅವಳ ವೇಷ ಎಲ್ಲರ ಗಮನವನ್ನು ಸೆಳೆಯುವಷ್ಟು ಸುಂದರ ಹಾಗೂ ಅಪರೂಪದ್ದಾಗಿತ್ತು. ರೇಶ್ಮೆ ಸೀರೆ ಉಟ್ಟಿದ್ದಾಳೆ, ಅದೂ ಗುಜರಾತಿ ಶೈಲಿಯಲ್ಲಿ! ಕೈಗೆ, ಕಿವಿಗೆ ಮತ್ತು ಕುತ್ತಿಗೆಗೆ ಚಿನ್ನದ ಒಡವೆಗಳು. ಸೊಂಟಪಟ್ಟಿ ಮತ್ತು ಬೈತಲೆಮಣಿ ಕೂಡಾ ಚಿನ್ನದ್ದೇ. ಪುಟ್ಟ ಮದುಮಗಳ ಹಾಗಿತ್ತು ಅವಳ ಶೃಂಗಾರ.

ಎಲ್ಲರ ಕಣ್ಣು ಅವಳ ಮೇಲೆ. ಜನ ಅವಳನ್ನು ತಮಾಷೆಯಾಗಿ ನೋಡುತ್ತಿದ್ದರು. ಆದರೆ ಅವಳ ಮುಖದಲ್ಲಿ ಮಾತ್ರ ಶೋಕಭಾವ ಕಾಣಿಸುತ್ತಿತ್ತು. ಅವಳು ಮೌನವಾಗಿ ಅಳುತ್ತಿದ್ದಳು. ಆದರೆ ಬಿಕ್ಕಳಿಕೆ ಕೇಳಿಸುತ್ತಿತ್ತು.

'ಏನಾಯಿತು?' ಎಂದು ಕೇಳಲು ಅವನ ನಾಲಿಗೆ ಚಡಪಡಿಸಿತು. ನಂತರ ಕಂಡಿತವನಿಗೆ, ಬೇಡ ಹತ್ತಿರದಲ್ಲಿಯೇ ಅವಳ ಅಮ್ಮ ಇದ್ದಾರೆ, ಅವರೇನು ಮಾಡ್ತಾರೆ ನೋಡೋಣ. ಆದರೆ ಆ ಹೆಂಗಸು ಮಾತ್ರ ಮಂಟಪದ ಕಡೆಗೆ ದೃಷ್ಟಿ ನೆಟ್ಟು ಕುಳಿತಿದ್ದರು.

ಈಗ ಮಂಟಪದಲ್ಲಿ ಇದ್ದವರೆಲ್ಲಾ ಎದ್ದು ನಿಂತರು. ಮದುಮಗನ ಕೈಯಲ್ಲಿ ಒಂದು ಗಿಂಡಿ ಇತ್ತು. ಅದರ ಹಿಡಿ ಮದುಮಗಳ ಕೈಯಲ್ಲಿತ್ತು. ಆಮೇಲೆ ಪುರೋಹಿತರು ಹೇಳಿದ ನಂತರ ಆ ಗಿಂಡಿಯನ್ನು ಮದುಮಗಳ ತಾಯಿ ತೆಗೆದುಕೊಂಡರು. ಮದುಮಗ ಮದುಮಗಳ ಕೈಯನ್ನು ತನ್ನ

ಬೊಗಸೆಯಲ್ಲಿಟ್ಟ. ಅವಳ ಕೈಯ ಮೇಲೆ ಅವಳ ತಂದೆ ತಮ್ಮ ಕೈ ಇಟ್ಟರು. ಅದರ ಮೇಲೆ ಮದುಮಗಳ ತಾಯಿ ಗಿಂಡಿಯಿಂದ ನೀರೆರೆದರು. ನೀರು ತಂದೆಯ ಹಸ್ತದ ಮೇಲಿಂದ, ಮದುಮಗಳ ಬೆರಳಿನಿಂದ, ಮದುಮಗನ ಬೊಗಸೆಯೊಳಗಿಂದ ಕೆಳಗೆ ಇಟ್ಟ ತಟ್ಟೆಯಲ್ಲಿ ಬೀಳತೊಡಗಿತು. ನಂತರ ಮದುಮಗಳು ವರನಿಗೆ, ಮತ್ತು ಅವನು ಅವಳಿಗೆ ಹೂವಿನ ಹಾರ ಹಾಕಿದರು. ಮಂಗಳಸೂತ್ರ ಧಾರಣೆಯಾಯಿತು. ಗಂಡ-ಹೆಂಡತಿಯ ಸಂಬಂಧ ಏರ್ಪಟ್ಟಿತು.

"ಯಾಕೆ ಅಳುತ್ತಿ?" ಅವನು ಕೇಳಿದ.

ಹುಡುಗಿ ಮುಖ ತಿರುಗಿಸಿ ಅವನನ್ನು ನೋಡಿದಳು. ಆದರೆ ಉತ್ತರ ನೀಡಲಿಲ್ಲ. ಆ ಹೆಂಗಸಿಗೆ ಮಗಳು ಅಳುತ್ತಿರುವುದು ಗೊತ್ತಿರಲಿಕ್ಕಿಲ್ಲ ಎಂದುಕೊಂಡು ಅವನು ಮತ್ತೆ ಕೇಳಿದ,

"ಹೇಳು, ಯಾಕೆ ಅಳ್ತಾ ಇದ್ದಿ?"

"ಅವಳಿಗೆ ಅಳಲು ಕಾರಣವೇನಾದರೂ ಬೇಕಾ?" ಹುಡುಗಿಯ ತಾಯಿ ಒಂದೆ ತಿರುಗಿ ಅವನಲ್ಲಿ ಹೇಳಿದಳು. "ಅವಳ ಕೈಯಲ್ಲಿ ಒಂದು ಪುಟ್ಟ ಕೈಚೀಲವಿತ್ತು. ಆಟೋದಲ್ಲಿ ಬರಬೇಕಾದರೆ ಎಲ್ಲಿಯೋ ಕಳೆದುಹೋಯಿತು."

"ಅಷ್ಟೇ ತಾನೇ. ಇಲ್ಲಿ ಬಾ, ಅಳಬೇಡ. ಬಾಮ್ಮಾ" ಅವಳನ್ನು ಹತ್ತಿರಕ್ಕೆಳೆದುಕೊಳ್ಳಲು ಮುಂದೆ ಬಾಗಿದವನಿಗೆ ಆ ಹೆಂಗಸಿನ ಮಡಿಲಲ್ಲಿ ಇನ್ನೊಂದು ಮಗು ಇರುವುದು ಗಮನಕ್ಕೆ ಬಂತು. ಆ ಸಂದಿಯಲ್ಲಿ ಗುಲಾಬಿಬಣ್ಣದ ಕಾಲುಚೀಲ ಧರಿಸಿದ ಮಗುವಿನ ಪುಟ್ಟಪಾದಗಳು ಗೋಚರಿಸಿದವು.

ಹುಡುಗಿ ಅವನ ಹತ್ತಿರ ಬರಲು ಅನುಮಾನಿಸಿದಳು. ಆದರೆ ಮುಖ ಪರಿಚಿತವೆನಿಸಿದಂತೆ ಹತ್ತಿರ ಬಂದಳು. ಅವನು ಅವಳನ್ನೆತ್ತಿ ತೊಡೆಯ ಮೇಲೆ ಕುಳ್ಳಿರಿಸಿ ಕೂದಲು ನೇವರಿಸುತ್ತಾ ಕೇಳಿದ,

"ನಿನ್ನ ಹೆಸರೇನು?"

ಅವಳು ಏನೋ ಗೊಣಗಿದಳು.

"ಹೇಳುದಿಲ್ಲವಾ?"

"ಶೋಭಾ" ಯಾವುದೋ ಇಷ್ಟವಿಲ್ಲದ ಕೆಲಸವನ್ನು ಮಾಡಿದಂತೆ ಕೆಳಧ್ವನಿಯಿಂದ ಹೇಳಿದಳು. ಅವಳ ಅಸಮಾಧಾನ ಇನ್ನೂ ಕಡಿಮೆಯಾಗಿರಲಿಲ್ಲ. ಅವನು ಅವಳಿಗೆ ವೃತ್ತಪತ್ರಿಕೆಯಲ್ಲಿದ್ದ ಚಿತ್ರ ತೋರಿಸತೊಡಗಿದ. ಭಾನುವಾರದ ಪುರವಣಿಯಲ್ಲಿ ಬೇಕಾದಷ್ಟು ಬಣ್ಣದ ಚಿತ್ರಗಳಿದ್ದವು. ಪ್ರಾಣಿಗಳ ಮತ್ತು ಪಕ್ಷಿಗಳ ಚಿತ್ರಗಳು. ಮಕ್ಕಳಿಗೂ, ಹಿರಿಯರಿಗೂ ಇಷ್ಟವಾಗುವ ಸುಂದರ ಚಿತ್ರಗಳು. ಅವನು ಒಂದನ್ನು ಬೆರಳಿಂದ ತೋರಿಸಿ ಕೇಳಿದ–

"ಇದೇನು?"

"ಜಿರಾಫೆ" ಅವಳ ಮಾತು ಪ್ರಾರಂಭವಾಯಿತು.

"ಮತ್ತು ಇದು?"

"ಮಂಗ!"

"ಅರೆ!"

ಈಗ ಅವಳ ಮುಖಭಾವ ಬದಲಾಯಿತು. ರಾಗ, ಶೋಕ, ಕಿರಿಕಿರಿ ಎಲ್ಲವೂ ಅಳಸಿಹೋಯಿತು. ಆದರೆ ಕಣ್ಣಿನಂಚಿನಲ್ಲಿ ತೇವ ಮಾತ್ರ ಕಾಣುತ್ತಿತ್ತು. ಅವಳು ಮಾತನಾಡುತ್ತಿದ್ದಂತೆ ಅವನು ಅವಳ ಕಣ್ಣಿನ ದುಃಖವನ್ನು ಅಳಿಸಿದ. ಅವಳು ಶಾಂತಳಾಗಿರುವುದನ್ನು ನೋಡಿ ಅವಳಮ್ಮ ತಿರುಗಿ ಕೇಳಿದಳು,

"ಅಳು ಮುಗಿಯಿತಾ?"

ಹುಡುಗಿ ಸುಮ್ಮನೆ ಚಿತ್ರ ನೋಡುತ್ತಾ ಕುಳಿತಳು. ಆ ಚಿತ್ರಗಳಲ್ಲಿರುವ ಪ್ರಾಣಿ, ಪಕ್ಷಿಗಳ ಕುರಿತು ತನಗೆ ತಿಳಿದಿರುವಷ್ಟನ್ನು ಅವನಲ್ಲಿ ಹೇಳಲು ಪ್ರಾರಂಭಿಸಿದಳು.

ಈಗ ಚಪ್ಪರದಲ್ಲಿ ಸೆಕೆ ಜಾಸ್ತಿಯಾಗಿದೆ. ಸೇರಿದ ಜನ ಪತ್ರಿಕೆ, ಕರವಸ್ತ್ರ ಹೀಗೆ ಕೈಗೆ ಸಿಕ್ಕಿದ ವಸ್ತುಗಳಿಂದ ಗಾಳಿ ಹಾಕಲು ಪ್ರಾರಂಭಿಸಿದ್ದಾರೆ. ಮಂಟಪದಲ್ಲಿ ಮದುಮಗಳ ಬಳಿ ಬೆನ್ನು ಬಗ್ಗಿದ ವಯಸ್ಸಾದ ವ್ಯಕ್ತಿಯೊಬ್ಬರು

ನಿಂತಿದ್ದಾರೆ. ಅವರು ಮದುಮಗನನ್ನು ಮಂಟಪದಿಂದ ಹೊರಗೆ ಕರೆತರುತ್ತಿದ್ದಾರೆ. ಮಂಟಪದ ಮುಂದೆ ಎರಡು ಎಲೆಗಳನ್ನು ಸಮನಾಂತರವಾಗಿ ಇಡಲಾಗಿದೆ. ಮದುಮಗ ಬಂದು ಒಂದು ಎಲೆಯ ಮೇಲೆ ನಿಂತುಕೊಂಡ. ಅವನ ಹಿಂದೆ ಆ ವಯಸ್ಸಾದ ವ್ಯಕ್ತಿ ನಿಂತುಕೊಂಡರು. ನಂತರ ಮದುಮಗಳು ಬಂದು ಮದುಮಗನ ಹತ್ತಿರ ನಿಂತುಕೊಂಡಳು. ಅವಳ ಹಿಂದೆ ಒಬ್ಬ ವಯಸ್ಸಾದ ಮಹಿಳೆ. ನಂತರ ಈ ಹಿರಿಯರಿಬ್ಬರೂ ವಧೂವರರನ್ನು ಎತ್ತಿ ಮುಂದಿನ ಎಲೆಯ ಮೇಲೆ ನಿಲ್ಲಿಸಿದರು. ಹಿರಿಯ ಮಹಿಳೆಯರು ಅಕ್ಷತೆಕಾಳು ಬೀರಿದರು.

ಅವನ ಹೊಟ್ಟೆಗೆ ಏನೋ ಮೆತ್ತಗೆ ತಾಗಿದಂತಾಯಿತು. ನೋಡಿದರೆ ಶೋಭಾ ಕತ್ತುವಾಲಿಸಿ ಅವನ ಮೇಲೆ ಒರಗಿಕೊಂಡಿದ್ದಾಳೆ. ಅವನು ಬಗ್ಗಿ ನೋಡಿದ. ಅವಳ ಕೈಯಿಂದ ಪತ್ರಿಕೆ ಜಾರಿ ಕೆಳಗೆ ಬಿತ್ತು. ತಕ್ಷಣ ಎಚ್ಚರವಾಗಿ ಕಣ್ಣು ಬಿಟ್ಟು ನೋಡಿದಳು. ಆದರೆ ರೆಪ್ಪೆ ತೆರೆದುಕೊಳ್ಳುವ ಮೊದಲೇ ಕಣ್ಣು ಬಾಡಿತು. ಅವಳನ್ನು ಸರಿಯಾಗಿ ಮಲಗಿಸುವಾಗ ಅವನ ಮನಸ್ಸಿಗೆ ಹೊಳೆಯಿತು, ಪಾಪ ಈಕೆ ಇಷ್ಟು ಹೊತ್ತು ಅಳುತ್ತಿದ್ದುದು ನಿದ್ದೆಯಿಂದ ಇರಬೇಕು.

ಚಪ್ಪರದಲ್ಲಿ ಇದ್ದವರೆಲ್ಲಾ ಎದ್ದು ನಿಲ್ಲುತ್ತಿದ್ದಾರೆ. ಊಟದ ಹೊತ್ತಾಗಿದೆ. ಪ್ರತಿಯೊಬ್ಬರೂ ಅದೇ ಉದ್ದೇಶದಿಂದ ಕಾಯುತ್ತಿರುವಂತೆ ಕಂಡಿತು. ಶೋಭಾಳ ಅಮ್ಮ ಕೂಡಾ ಎದ್ದು ನಿಂತಳು. ತಿರುಗಿ ನೋಡಿದಾಗ ಅವಳಿಗೆ ಆಶ್ಚರ್ಯವಾಯಿತು.

"ಮಲಗಿಬಿಟ್ಟಳಾ?"

"ನಿದ್ದೆಯಿಂದ ಅಳುತ್ತಿದ್ದಳೆಂದು ಕಾಣುತ್ತೆ" ಅವನು ಹೇಳಿದ.

"ಶೋಭಾ.." ಅವಳು ಕರೆದಳು, "ಏಳು, ಊಟ ಮಾಡೋಣ"

ಹುಡುಗಿ ಯಾವ ಪ್ರತಿಕ್ರಿಯೆಯನ್ನೂ ತೋರಿಸಲಿಲ್ಲ.

"ಮಲಗಲು ಬಿಡಿ. ಎದ್ದರೆ ಮತ್ತೆ ಅಳಬಹುದು"

"ಮನೆಗೆ ಬೇಗ ಹೋಗುವುದಿತ್ತು"

"ನೀವು ಊಟ ಮಾಡಿ ಬನ್ನಿ"

ಅವಳಿಗೆ ಏನು ಮಾಡಬೇಕೆಂದೇ ತೋಚಲಿಲ್ಲ. ಅವಳು ಸುಮ್ಮನೆ ನಿಂತಿರುವುದನ್ನು ನೋಡಿ ಅವನೇ ಹೇಳಿದ– "ಹೇಗೂ ನಿಮ್ಮ ಕೈಯಲ್ಲಿ ಸಣ್ಣಮಗು ಬೇರೆ ಇದೆ. ಇವಳು ಊಟಕ್ಕೆ ಕುಳಿತಲ್ಲಿ ಮತ್ತೆ ಅಳು ಶುರು ಮಾಡಿದರೆ ನಿಮಗೇ ಕಷ್ಟ. ನನಗೆ ಊಟಕ್ಕೆ ಅರ್ಜೆಂಟಿಲ್ಲ. ನಾನು ಇವಳನ್ನು ನೋಡ್ಕೋತೀನಿ"

"ಹಾಗಾದರೆ ನಾನು ಬೇಗ ಹೋಗಿ ಬರ್ತೇನೆ, ಆಂ.."

ಮನಸ್ಸಿಲ್ಲದಿದ್ದರೂ ಅವಳು ಒತ್ತಾಯಪೂರ್ವಕವಾಗಿ ಎಂಬಂತೆ ಹೋದಳು.

ಊಟ ಮುಗಿಸಿ ಬಂದಾಗ ಆ ಜಾಗದಲ್ಲಿ ಅವನು ಕಾಣಿಸಲಿಲ್ಲ. ಅವಳು ಆಶ್ಚರ್ಯದಿಂದ ನಾಲ್ಕೂ ದಿಕ್ಕಿಗೆ ದೃಷ್ಟಿ ಹರಿಸಿದಳು. ಶೋಭಾ ಕೂಡಾ ಕಾಣಿಸುತ್ತಿಲ್ಲ.

"ನಾನು ಊಟಕ್ಕೆ ಹೋದಾಗ ಹುಡುಗಿ ಎದ್ದು ಅಳಲು ಪ್ರಾರಂಭಿಸಿರಬೇಕು. ಅವಳನ್ನು ಸಮಾಧಾನ ಪಡಿಸಲು ಬೇರೆಡೆ ಕರೆದುಕೊಂಡು ಹೋಗಿರಬಹುದು. ನೋಡೋಣ, ಅವನು ಬರಬಹುದು, ಇಲ್ಲೇ ಕುಳಿತು ಕಾಯುತ್ತೇನೆ." ಎಂದುಕೊಂಡು ಅವಳು ಕುಳಿತಳು.

ಆಮೇಲೆ ಮತ್ತೊಂದು ವಿಚಾರ ಮನಸ್ಸಿಗೆ ಬಂತು. 'ನನ್ನನ್ನು ಹುಡುಕಿ ಊಟದ ಕೋಣೆಯತ್ತ ಹೋಗಿರಬಹುದೇ? ಅಲ್ಲಿಂದ ಬರುವಾಗ ಅವರೇನು ಕಣ್ಣಿಗೆ ಕಂಡಿಲ್ಲ. ಆದರೂ ಹೇಳಲಾಗುವುದಿಲ್ಲ. ಜನರ ನೂಕಾಟ ಬೇರೆ.. ಎಂಜಲು ಕೈ ಬೇರೆಯವರಿಗೆ ತಾಗುವುದು ಬೇಡವೆಂದು ಜಾಗ್ರತೆಯಿಂದಿರುವಾಗ ನೋಡಿಲ್ಲದಿರಬಹುದು. ಕೈಯಲ್ಲಿದ್ದ ಮಗುವನ್ನು ಬಿಟ್ಟು ಬೇರೆ ಯಾವುದೂ ಗಮನಕ್ಕೆ ಬರಲೇ ಇಲ್ಲ. ಸರಿ, ಅಲ್ಲಿಯೇ ಹೋಗಿ ನೋಡೋಣ..'

ಅವಳು ಮತ್ತೆ ಊಟದ ಕೋಣೆಗೆ ಹೋದಳು. ಎಲ್ಲಾ ಕಡೆ ಕಣ್ಣು ಹೊರಳಿಸಿ ನೋಡಿಯಾಯಿತು. ಆದರೆ ಆ ಮನುಷ್ಯನಾಗಲೀ, ಶೋಭಳಾಗಲೀ ಕಾಣಿಸಲೇ ಇಲ್ಲ. ಅವಳು ಮುಜುಗರದಿಂದ ನಿಂತಿರುವುದನ್ನು ನೋಡಿ ಯಾರೋ ಕೇಳಿದರು, "ಊಟ ಆಯ್ತೇನಮ್ಮ?"

"ಆಂ?"

ಈಗ ಅವಳಿಗೆ ಚಿಂತೆ ಹತ್ತಿತು. ಶೋಭಾ ಎಲ್ಲಿ? ಇಷ್ಟು ಬೇಗ ಎಚ್ಚರವಾಗಿ ಅಳಲು ಪ್ರಾರಂಭಿಸಿದಳೇ? ಅವನ ಬಳಿ ಹುಡುಗಿಯನ್ನು ಬಿಟ್ಟು ಹೋದದ್ದು ತಪ್ಪಾಗಿರಬಹುದೇ? ಹುಚ್ಚುತನದ ಕೆಲಸ ಮಾಡಿದೆ! ಒಬ್ಬ ಅಪರಿಚಿತನ ಬಳಿ ಮಗಳನ್ನು ಬಿಟ್ಟು ಊಟಕ್ಕೆ ಹೋದೆನಲ್ಲ!

"ಯಾರವನು?' ಅವಳ ಮನಸ್ಸಿನಲ್ಲಿ ಪ್ರಶ್ನೆ ಹುಟ್ಟಿತು. ನೋಡಲು ಸಭ್ಯನಂತೆ ಕಾಣುತ್ತಿದ್ದ. ಕಲಿತವ ಎನ್ನುವುದರಲ್ಲಿ ಸಂದೇಹವಿಲ್ಲ. ಆಂಗ್ಲ ಪತ್ರಿಕೆ ಓದುತ್ತಿದ್ದನಲ್ಲ. ಆದರೆ ಯಾರವನು? ಯಾರ ಮಗ? ಪರಿಚಯ ಏನೂ ಇಲ್ಲ. ಹೆಸರು ಬೇರೆ ವಿಚಾರಿಸಿಲ್ಲ.

ಅವಳ ನಡಿಗೆ ವೇಗ ಹೆಚ್ಚಾಯಿತು. ಊಟದ ಮನೆಯಿಂದ ಕೈ ತೊಳೆಯುವ ನಲ್ಲಿಯ ಕಡೆಗೆ. ಅಲ್ಲಿಂದ ಕಕ್ಕಸು ಇರುವೆಡೆ..ಎಲ್ಲಿ ಹುಡುಕಿದರೂ ಮಗಳಾಗಲೀ ಆ ಮನುಷ್ಯನಾಗಲೀ ಕಣ್ಣಿಗೆ ಬೀಳುತ್ತಿಲ್ಲ.

ತಕ್ಷಣ ಅವಳ ಮನಸ್ಸಿಗೆ ಹೊಳೆಯಿತು--ಹುಡುಗಿಯ ಮೈತುಂಬಾ ಚಿನ್ನದ ಒಡವೆಗಳಿವೆ. ಚಿನ್ನಕ್ಕಾಗಿ ಮಗುವನ್ನು ಎಲ್ಲಿಂಯಾದರೂ ಕೊಂಡುಹೋಗಿ...ಅವಳ ತಲೆ ಪೂರ್ತಿ ಕೆಟ್ಟುಹೋಯಿತು. ಎದೆ ಬಡಿತ ಹೆಚ್ಚಾಯಿತು. ಗಂಟಲು ಒಣಗಿತು. ಹಾಳಾದವನು ಎಲ್ಲಿ ಹೋಗಿ ಕೂತಿದ್ದಾನೆ? ನನ್ನ ಮಗಳೆಲ್ಲಿ? ಹಾಗೆಂದು ಅವನಿಗೆ ಬೈದು ಏನು ಪ್ರಯೋಜನ? ಅವನ ಮಡಿಲಲ್ಲಿ ಮಗಳನ್ನು ಬಿಟ್ಟು ಹೋಗುವುದಕ್ಕೆ ನಿನಗೆ ಹೇಗೆ ಅನಿಸಿತು? ಮೂರ್ಖತನದ ಕೆಲಸ ಮಾಡಿದೆ..ಶುದ್ಧ ಮೂರ್ಖತನ!

ಊಟದ ಮನೆಯಿಂದ ಮಹಡಿ ಹತ್ತಿ ಹೋಗುವಲ್ಲಿ ಏಣಿ ಇತ್ತು. ಅವಳಿಗರಿವಿಲ್ಲದೆ ಮಹಡಿ ಹತ್ತಿಹೋದಳು. ಅಲ್ಲಿ ಕೆಲವು ಕೋಣೆಗಳು ಇದ್ದವು. ಒಂದೆರಡರ ಬಾಗಿಲು ತೆರೆದಿವೆ. ಅವರು ಅಲ್ಲಿ ಎಲ್ಲಿಯೂ ಕಾಣಿಸಲಿಲ್ಲ. ಈಗ ಅವಳ ಎದೆ ಜೋರಾಗಿ ಬಡಿದುಕೊಳ್ಳಲಾರಂಬಿಸಿತು. ಆ ಸದ್ದು ಕಿವಿಯವರೆಗೆ ಕೇಳಿಸುತಿತ್ತು. ಅವಳು ಮತ್ತೆ ಮತ್ತೆ ಉಗುಳು ನುಂಗಿದಳು.

"ಅಯ್ಯೋ ಅಮ್ಮಾ..' ಎಂದು ಗಟ್ಟಿಯಾಗಿ ಕಿರಿಚಿಕೊಳ್ಳಬೇಕೆನಿಸಿತು. ಅಳು ಬಂತು. ಹಾಳಾದವನು ಅವಳನ್ನು ಎಲ್ಲಿ ಕರೆದುಕೊಂಡು ಹೋದ?

ಅಥವಾ... ಅಳುವ ಮಗಳನ್ನು ಕರೆದುಕೊಂಡು ಹೊರಗೆಲ್ಲಾದರೂ ಹೋಗಿರಬಹುದೇ? ಹಾಗಾದರೆ ಈಗ ಖಂಡಿತಾ ಬಂದಿರುತ್ತಾನೆ. ಬಂದು ತನ್ನ ಜಾಗದಲ್ಲಿ ಕುಳಿತಿರುತ್ತಾನೆ... ದೇವರೇ ಹುಡುಗಿಯನ್ನು ಕರೆದುಕೊಂಡು ಮತ್ತೆ ಅದೇ ಜಾಗದಲ್ಲಿ ಅವನನ್ನು ಕಾಣುವಂತಾದರೆ..ನಿನಗೆ ಒಂದು...

ದೇವರಿಗೆ ಹರಕೆ ಹೊತ್ತು, ಮಗುವನ್ನು ಎತ್ತಿಕೊಂಡು ಅವಳು ಮತ್ತೆ ಚಪ್ಪರಕ್ಕೆ ನುಗ್ಗಿದಳು..'ಅವಳನ್ನು ತಪ್ಪದೆ ನನಗೆ ತಲುಪಿಸು ದೇವರೇ..ಕಾಪಾಡು ದೇವರೇ.. ಕಾಪಾಡು.. ಇನ್ನು ಮುಂದೆ ಇಂತಹ ತಪ್ಪು ನಡೆಯುವುದಿಲ್ಲ..'

ಚಪ್ಪರದಲ್ಲಿ ಜನ ಅಲ್ಲಿ ಇಲ್ಲಿ ಓಡಾಡುತ್ತಿದ್ದಾರೆ. ಕೆಲವರು ನಿಂತಿದ್ದಾರೆ. ಒಬ್ಬರಿಗೊಬ್ಬರು ವಿದಾಯ ಹೇಳುತ್ತಾ ಹಿಂತಿರುಗುವ ಸಿದ್ಧತೆಯಲ್ಲಿ ಕೆಲವರಿದ್ದಾರೆ. ದಣಿದವರು ಸುಮ್ಮನೆ ಕೂತಿದ್ದಾರೆ. ಆದರೆ ಶೋಭಾ ಅಥವಾ ಆ ಅಪರಿಚಿತ ಗಂಡಸು ಮಾತ್ರ ಎಲ್ಲಿಯೂ ಕಾಣಿಸುತ್ತಿಲ್ಲ.

"ಹೇಗಿದ್ದೀ?" ಯಾರೋ ಅವಳನ್ನು ಕೇಳಿದರು. ಅವಳು ನಗುವ ಪ್ರಯತ್ನ ಮಾಡಿದಳು. ಆದರೆ ತುಟಿ ಅರಳಲಿಲ್ಲ. ಸುಮ್ಮನೆ ತಲೆ ಅಲ್ಲಾಡಿಸಿದಳು. ಅದು ಪ್ರಶ್ನೆ ಕೇಳಿದ ವ್ಯಕ್ತಿಯ ಗಮನಕ್ಕೆ ಬರಲಿಲ್ಲ. ಅವಳಿಗೆ ಬೇರೆ ಏನೂ ಹೊಳೆಯುತ್ತಿಲ್ಲ. ಗಾಳಿಯಲ್ಲಿ ತೇಲುವ ಹತ್ತಿಯಂತೆ ಚಪ್ಪರದ ಹೊರಗೆ ಬಂದು ಸುತ್ತಲೂ ದೃಷ್ಟಿ ಹಾಯಿಸಿದಳು.

ಮಾವಿನ ಮರದ ನೆರಳಲ್ಲಿ ಹಸುವೊಂದು ಮಲಗಿ ಮೆಲುಕಾಡುತ್ತಿದೆ. ಕಸದ ಬುಟ್ಟಿಗೆ ಎಸೆದ ಊಟದೆಲೆಗಳಿಗೆ ದನಗಳು, ನಾಯಿಗಳು, ಕಾಗೆಗಳು ಮುತ್ತಿಕೊಂಡಿವೆ. ಎಂಜಲೆಲೆಗಳನ್ನು ಮತ್ತೆ ಮತ್ತೆ ತಂದು ಬಿಸಾಡುತ್ತಿದ್ದಾರೆ. ರಸ್ತೆಯುದ್ದಕ್ಕೂ ಓಡುವ ಕಾರು, ಸ್ಕೂಟರ್‌ಗಳ ಸದ್ದು ಬಿಟ್ಟರೆ ಬೇರೆ ಯಾರೂ ಕಣ್ಣಿಗೆ ಕಾಣಿಸುತ್ತಿಲ್ಲ.

ಆತ ಅವಳನ್ನು ಕರೆದುಕೊಂಡು ಎಲ್ಲೋ ಹೋಗಿರಬಹುದೇ? ಹತ್ತು ಹದಿನೈದು ಸವರನ್ ಚಿನ್ನದ ಒಡವೆಗಳು..ಅದಕ್ಕಾಗಿ ಅವಳನ್ನು ಕರೆದುಕೊಂಡು ಹೋಗಿ..ಆ ಆಲೋಚನೆ ಹೊಳೆದದ್ದೇ ಅವಳಿಗೆ ಕಸಿವಿಸಿಯಾಯಿತು. ಚಪ್ಪರದ ದ್ವಾರದ ಬಳಿ ನಿಂತು ದೃಷ್ಟಿ ಹಾಯುವಷ್ಟು ದೂರದವರೆಗೆ ನೋಡುತ್ತಾ ನಿಂತಳು. ಒಳಗೆ ಎಲ್ಲಾ ಕಡೆ ಹುಡುಕಿ ಆಯ್ತು..ಹೊರಗೆ ಹೋಗಲೇ? ಹೇಗೆ

ಹೋಗಲಿ? ಎಲ್ಲಿಗೆ ಹೋಗಲಿ? ಎಷ್ಟು ದೂರ ಹೋಗಲಿ? ಯಾವ ದಿಕ್ಕಿಗೆ ಹೋಗಲಿ?

ನನ್ನ ಪುಟ್ಟಾ.. ನನ್ನ ಪುಟ್ಟಾ..

ಒಳಗೆ ಹೋಗಿ ಕೇಳಿಬಿಡಲೇ– ನನ್ನ ಮಗಳನ್ನು ನೋಡಿದ್ದೀರಾ?

ಕೇಳಿದರೆ ನಡೆದಿರುವುದನ್ನು ಬಿಡಿಸಿ ಹೇಳಬೇಕಾಗಿ ಬರಬಹುದು..ನಾನು ಒಬ್ಬ ಅಪರಿಚಿತನ ಬಳಿ ಮಗಳನ್ನು ಬಿಟ್ಟು ಊಟಕ್ಕೆ ಹೋದ ಮೂರ್ಖತನ..ಆತನ ಹೆಸರು, ವಿಳಾಸ, ಯಾವುದನ್ನೂ ವಿಚಾರಿಸಲಿಲ್ಲ. ಅವಳನ್ನು ನನ್ನ ಹತ್ತಿರ ಬಿಟ್ಟುಹೋಗಿ ಎಂದು ಅವನು ಹೇಳಿದ. ನಾನು ಹಾಗೇ ಮಾಡಿಬಿಟ್ಟೆ. ಹುಚ್ಚುಬುದ್ಧಿ.. ಮೂರ್ಖ ಮನಸ್ಸು.. ಜನರು ನಕ್ಕಾರು.

"ಆಟೋಗೆ ಕಾಯುತ್ತಿದ್ದೀಯಾ?"

ಹಿಂದಿನಿಂದ ಸುಮತಿ ದೊಡ್ಡಮ್ಮನ ಧ್ವನಿ ಕೇಳಿಬಂತು. ಇಷ್ಟು ಹೊತ್ತು ಇವರೆಲ್ಲಿದ್ದರು? ಆಗಲೇ ಇವರು ಕಾಣಿಸಿಕೊಂಡಿದ್ದರೆ ಈ ಸಮಸ್ಯೆಯೇ ಇರುತ್ತಿರಲಿಲ್ಲ.

"ದೊಡ್ಡಮ್ಮ, ನೀವು ಶೋಭಾಳನ್ನು ನೋಡಿದ್ದೀರಾ?"

"ಇಲ್ವಲ್ಲಾ.. ಯಾಕೆ?"

"ನಾನು ಅವಳನ್ನು ಹುಡುಕುತ್ತಿದ್ದೇನೆ"

"ಎಲ್ಲಿ ಹೋಗಿದ್ದಾಳೆ ಅವಳು?"

ಆ ಸುದ್ದಿಯನ್ನು ದೊಡ್ಡಮ್ಮನಿಗೆ ಹೇಗೆ ಹೇಳುವುದೆಂದೇ ಅವಳಿಗೆ ತೋಚಲಿಲ್ಲ. ಅವಳ ತುಟಿ ಅದುರಿತು. ಕಣ್ಣು ತುಂಬಿಬಂತು. ಧ್ವನಿ ನಡುಗಿತು. ಆದರೂ ನಡೆದುದನ್ನೆಲ್ಲಾ ಸಂಕ್ಷಿಪ್ತವಾಗಿ ದೊಡ್ಡಮ್ಮನಿಗೆ ವಿವರಿಸಿದಳು.

"ಅಯ್ಯೋ ದೇವರೇ!" ದೊಡ್ಡಮ್ಮನಿಗೆ ಆಘಾತವಾಯಿತು. "ಇದೆಂತಹ ಪೆದ್ದು ಬುದ್ಧಿ ನಿಂದು? ಪರಿಚಯ ಇಲ್ಲ. ಕೇಳಿ ಗೊತ್ತಿಲ್ಲ. ಅಂತಹ ಮನುಷ್ಯನ ಬಳಿ ಮಗಳನ್ನು ಬಿಟ್ಟು ಹೋದೆಯಲ್ಲ? ಅವನು..."

ದೊಡ್ಡಮ್ಮನ ಮಾತು ಕೇಳಿ ಅದುವರೆಗೆ ತಡೆ ಹಿಡಿದಿದ್ದ ಸಂಯಮ ತಪ್ಪಿತು. ಅವಳು ದೊಡ್ಡದಾಗಿ ಅಳಲಾರಂಭಿಸಿದಳು. ಮುಖ್ಯದ್ವಾರದ ಬಳಿ ನಿಂತು ಅಳುತ್ತಿರುವ ಅವಳನ್ನು ನೋಡಿ ಜನ ಹತ್ತಿರ ಬಂದು ಕೇಳತೊಡಗಿದರು, "ಏನಾಯ್ತು? ಏನಾಯ್ತು?"

ವಿಷಯ ತಿಳಿದುಕೊಂಡ ನಾಲ್ಕಾರು ತರುಣರು ಆ ವ್ಯಕ್ತಿಯ ಮತ್ತು ಹುಡುಗಿಯ ಮಾಹಿತಿಯನ್ನು ಕೇಳಿ ತಿಳಿದುಕೊಂಡರು. ತಕ್ಷಣ ಅವರನ್ನು ಹುಡುಕಿ ತೆಗೆಯಲು ಸ್ಕೂಟರ್ ಹತ್ತಿ ಹೋರಟೇ ಬಿಟ್ಟರು.

ದೊಡ್ಡಮ್ಮ ಅವಳನ್ನು ಕರೆದುಕೊಂಡು ಚಪ್ಪರದೊಳಗೆ ಬಂದರು. ಅವಳು ಕುರ್ಚಿಯ ಮೇಲೆ ಕುಳಿತು ಮುಖಮುಚ್ಚಿಕೊಂಡಳು. ಮಗುವನ್ನು ದೊಡ್ಡಮ್ಮ ಕೈಗೆತ್ತಿಕೊಂಡರು. ಏನು ನಡೆಯಿತು ಎಂದು ಜನ ಮತ್ತೆ ಮತ್ತೆ ವಿಚಾರಿಸಲಾರಂಭಿಸಿದರು. ಎಲ್ಲರ ಪ್ರಶ್ನೆಗಳಿಗೆ ದೊಡ್ಡಮ್ಮನೇ ಉತ್ತರ ನೀಡುತ್ತಾ ಪರಿಸ್ಥಿತಿಯನ್ನು ಸಂಭಾಳಿಸುವ ಪ್ರಯತ್ನ ನಡೆಸಿದರು.

ಈಗ ಅವಳ ಎದೆಬಡಿತ ಹತೋಟಿಗೆ ಬಂತು. ಆತಂಕವನ್ನು ಅಡಗಿಸುವ ಪ್ರಯತ್ನದಲ್ಲಿದ್ದವಳ ಕಣ್ಣಮುಂದೆ ಗೋಚರಿಸುತ್ತಿದ್ದುದು ಮಗಳ ಅಳುಮೋರೆ. ನಿದ್ದೆಯಲ್ಲಿ ಶಾಂತವಾದ ಮುಖಮುದ್ರೆ. ಮದುಮಗಳಂತೆ ಶೃಂಗರಿಸಿದ ರೂಪ.

ನನ್ನ ಪುಟ್ಟಾ.. ನನ್ನ ಪುಟ್ಟಾ..

"ಅಯ್ಯೋ ಇಲ್ಲಿ ನೋಡೇ.." ದೊಡ್ಡಮ್ಮನ ಎತ್ತರದ ಧ್ವನಿ ಕೇಳಿ ಅವಳು ಮುಖವೆತ್ತಿ ನೋಡಿದಳು. ಊಟದ ಕೋಣೆಯ ದಿಕ್ಕಿನಿಂದ ಅವಳ ಮಗಳನ್ನು ಕರೆದುಕೊಂಡು ಆ ಅಪರಿಚಿತ ವ್ಯಕ್ತಿ ಬರುತ್ತಿದ್ದಾನೆ. ಹತ್ತಿರ ಬಂದೊಡನೆ ಆತ ನಗುತ್ತಾ ಹೇಳಿದ,

"ತಗೊಳ್ಳಿ ನಿಮ್ಮ ಮಗಳನ್ನು!"

ಅವಳು ಗಡಬಡಿಸಿ ಎದ್ದುನಿಂತು ಮಗಳನ್ನು ಹತ್ತಿರ ಎಳೆದುಕೊಂಡಳು.

"ಇವನೇನಾ?" ದೊಡ್ಡಮ್ಮನ ಪ್ರಶ್ನೆಗೆ ಅವಳು ಹೌದೆಂದು ಉತ್ತರಿಸಿದಳು. ಅದನ್ನು ಕೇಳಿದ ತಕ್ಷಣ ದೊಡ್ಡಮ್ಮನ ಸಿಟ್ಟಿಗೆ ಅವನು ಗುರಿಯಾದ.

"ನಿನಗೆ ಸ್ವಲ್ಪವೂ ಬುದ್ಧಿ ಇಲ್ವಾ?"

"ಏನಾಯ್ತು?" ಅವನ ಮುಖ ಬಾಡಿತು. ನಗು ಅಳಿಸಿಹೋಯಿತು.

"ಏನಾಯ್ತಾ? ಯಾರಿಗೂ ಹೇಳದೆ ಮಗುವನ್ನು ಕರೆದುಕೊಂಡು ಇಷ್ಟು ಹೊತ್ತು ಎಲ್ಲಿ ಕೂತಿದ್ದೆ?"

"ನಾನು ಮಹಡಿ ಮೇಲೆ ಕೋಣೆಯಲ್ಲಿದ್ದೆ. ಇವಳು ಮಲಗಿದ್ದಳಲ್ಲಾ"

"ಹಾಗಂತ ಹೇಳಿ ಹೋಗುವುದು ಬೇಡವೇ? ನಾವು ಅವಳನ್ನು ಎಷ್ಟು ಹುಡುಕಾಡಿದೆವು!"

ಅವನು ಮೌನವಾಗಿ ನಿಂತ.

"ಹೆತ್ತವಳ ಸಂಕಟ ನಿನಗೆ ಹೇಗೆ ಗೊತ್ತಾಗಬೇಕು?"

"ತಪ್ಪಾಯಿತು, ಕ್ಷಮಿಸಿಬಿಡಿ"

ಹೆಂಡತಿಯಾದವಳು ತನ್ನ ಗಂಡ, ಮಕ್ಕಳನ್ನು ಬಿಟ್ಟು ಮಗನ ವಯಸ್ಸಿನ ಹುಡುಗನೊಂದಿಗೆ ಹೋಗುತ್ತಾಳೆ. ಪುಟ್ಟ ಮಗಳ ಮೇಲೆ ತಂದೆಯಿಂದ ಅತ್ಯಾಚಾರ ನಡೆಯುತ್ತದೆ... ಅಂತಹ ಕಾಲವಿದು. ಅಳುತ್ತಿರುವ ಹುಡುಗಿಯನ್ನು ಸಮಾಧಾನ ಪಡಿಸಲು ಕರೆದುಕೊಂಡು ಹೋಗುವುದು ಕೂಡಾ ಅಪರಾಧವೇ.



# ಮಚ್ಚೆ

ಮನೆ ಬಾಗಿಲು ಮುಚ್ಚಿದೆ. ಯಾರಿಗೂ ಎಚ್ಚರವಿರುವ ಹಾ
ಕಾಣುವುದಿಲ್ಲ. ಈಗ ಮೊದಲಿನ ಹಾಗೆ ಕೋಳಿ ಕೂಗಿನೊಂದಿಗೆ ಏಳುವವ
ಯಾರಿದ್ದಾರೆ! ಹಾಗೆ ಒಂದು ವೇಳೆ ಬೇಗ ಏಳುವವರಿದ್ದರೆ ಅದು ಕಾಮತ
ಮುದಿತಾಯಿ ಮಾತ್ರ. ಈಗಲೂ ಒಳಗೆ ಅವರೇ ಎದ್ದಿರಬೇಕು. ಹೀ
ಯೋಚಿಸುತ್ತಾ ಮನೆಗೆ ಸುತ್ತು ಬಂದ ಭುಂಡಿ ಹಿತ್ತಿಲ ಬಾಗಿಲು ಬಡಿದಳು

ಪೂರ್ವ ದಿಕ್ಕಿನಿಂದ ಮುಂಜಾನೆಯ ನಸುಬೆಳಕು ಹರಡಿಕೊಳ್ಳುತ್ತಿದೆ
ಕತ್ತಲೆ ಕಳಚಿದ ಆಗಸದಲ್ಲಿ ನಕ್ಷತ್ರಗಳು ಮಂದವಾಗಿ ಮಿನುಗುತ್ತಿವೆ. ಮರಗ
ಮರೆಯಿಂದ, ಮುಗಿಲಿನ ಕಡೆಯಿಂದ ಹಕ್ಕಿಗಳು ಚಿಲಿಪಿಲಿಗುಟ್ಟುತ್ತಿವೆ. ಅವ
ಆ ಹಾಡಿನಲ್ಲಿ ಕಾಗೆಗಳ ಕಾಂವ್..ಕಾಂವ್..ರಾಗ ಒಂದಾಗಿ ಸೇರುತ್ತಿದೆ
ಇದ್ಯಾವುದನ್ನೂ ಭುಂಡಿ ಲಕ್ಷ್ಯಕ್ಕೆ ತಂದುಕೊಳ್ಳಲೇ ಇಲ್ಲ. ಯಾರಾದರೂ
ಬಂದು ಬಾಗಿಲು ತೆರೆಯಬಹುದೇ ಎಂದುಕೊಂಡು ಅವಳು ಕಿವಿ ನೆಟ್ಟಗ
ಮಾಡಿ ನಿಂತಿದ್ದಾಳೆ. ಸ್ವಲ್ಪ ಹೊತ್ತು ಬಿಟ್ಟು ಬಾಗಿಲ ಚಿಲಕ ಅಲುಗಾಡಿಸಿ
ತಾನು ಬಂದಿರುವ ಸೂಚನೆ ನೀಡಿದಳು. ಒಳಗೆ ಯಾರೋ ನಡೆದು
ಬರುವ ಸದ್ದಾಯಿತು. ಬಾಗಿಲು ತೆರೆಯಿತು. ಭುಂಡಿ ಯೋಚಿಸಿದ
ರೀತಿಯಲ್ಲಿಯೇ ಅಲ್ಲಿ ದೊಡ್ಡ ಯಜಮಾನಿ ನಿಂತಿದ್ದರು. ಮನೆಯೊಳಗೆ
ಕಾಲಿಟ್ಟ ಭುಂಡಿ ಕೇಳಿದಳು,

"ಯಾರೂ ಎದ್ದಿಲ್ಲವೇನು?"

"ಇಲ್ಲ ಭುಂಡೆ, ನಿನ್ನೆ ರಾತ್ರಿ ರಾಮ ಬರುವಾಗಲೇ ತುಸು ತಡವಾಯಿತು"

"ಓ" ಎಂದು ಹೇಳಿದ ಭುಂಡಿ ತಾನು ತಂದ ಪಾತ್ರೆಗಳನ್ನು ಅಲ್ಲೇ
ಕೆಳಗಿಟ್ಟಳು. ರಾತ್ರಿಯ ಎಂಜಲು ತಟ್ಟೆ, ಲೋಟ ಮತ್ತು ಇತರ ಪಾತ್ರೆಗಳನ್ನು
ಒಟ್ಟು ಮಾಡಿ ಹೊಳೆಯ ದಡದ ಮೇಲೆ ರಾಶಿ ಹಾಕಿ ಬಂದಳು. ನಂತರ
ಮಾಡಿನ ತೊಲೆಗೆ ಸಿಕ್ಕಿಸಿಟ್ಟ ತೆಂಗಿನ ಸಿಪ್ಪೆಗಳನ್ನು ಕೈಗೆ ತೆಗೆದುಕೊಂಡು
ಬೂದಿ ಡಬ್ಬ ಹುಡುಕಲಾರಂಭಿಸಿದಳು. ಬೂದಿ ಡಬ್ಬವನ್ನು ಕೊಡದಲ್ಲಿಟ್ಟು
ಹೊರಡುವಾಗ ದೊಡ್ಡ ಯಜಮಾನಿ ಕೇಳಿದರು,

"ನಿನ್ನ ಮೊಮ್ಮಗಳೆಲ್ಲಿ? ಇವತ್ತು ಬರಲಿಲ್ಲವೇನು?"

"ಇಲ್ಲ ಮಾಲಕಿನ್, ಅವಳಿಗೆ ತಲೆ ನೋವಂತೆ. ಇವತ್ತು ಅವಳು ಬರುವುದಿಲ್ಲ."

ಭುಂಡಿ ಮಾತಿಗೆ ನಿಲ್ಲಲಿಲ್ಲ. ಅವಳು ಹೊಳೆಯ ಹತ್ತಿರ ಹೋಗಿ ಬೂದಿ ಡಬ್ಬ ತೆಗೆದಿಟ್ಟು ಕೊಡದಲ್ಲಿ ನೀರು ತುಂಬಿದಳು. ನಂತರ ಪಾತ್ರೆಗಳ ಮೇಲೆ ನೀರು ಸುರಿದು ನೆನೆಯಲಿಟ್ಟಳು. ಮತ್ತೆ ಕೊಡದಲ್ಲಿ ನೀರು ತುಂಬಿಟ್ಟು ಮನೆಗೆ ಬಂದಳು. ಕಾಮತರು ಎದ್ದು ಬಂದದ್ದನ್ನು ನೋಡಿ ಪಕ್ಕಕ್ಕೆ ಸರಿದು ಅವರಿಗೆ ದಾರಿ ಬಿಟ್ಟುಕೊಟ್ಟಳು. ಆಮೇಲೆ ಅಡುಗೆ ಮನೆಗೆ ಹೋಗಿ ಅಲ್ಲಿ ಮೂಲೆಯಲ್ಲಿದ್ದ ಪೊರಕೆಯನ್ನು ಕೈಗೆತ್ತಿಕೊಂಡು, ಮನೆಯ ಮುಂಭಾಗಕ್ಕೆ ಬಂದು ಇಡೀ ಅಂಗಳವನ್ನು ಗುಡಿಸಿ ಸ್ವಚ್ಛ ಮಾಡಿದಳು. ಕೊಡದ ನೀರಿನಲ್ಲಿ ಸೆಗಣಿ ಕಲಸಿ ಸಾರಿಸಿದಳು. ಅಂಗಳದ ಕೆಲಸ ಮುಗಿಸಿ ಹೊಳೆಯತ್ತ ಹೆಜ್ಜೆ ಹಾಕಿದಾಗ ಅವಳಿಗೆ ಮತ್ತೆ ಕಾಮತರು ಎದುರಾದರು. ಅವರ ತಲೆಕೂದಲು ಮತ್ತು ಭುಜದ ರೋಮ ಬೆಳ್ಳಗಾಗಿರುವುದು ಅವಳ ಗಮನಕ್ಕೆ ಬಂತು. ನಿನ್ನೆ ಮೊನ್ನೆಯ ಹುಡುಗ. ಸ್ವತಃ ನಾನೇ ಕಂಕುಳಲ್ಲಿ ಎತ್ತಿ ತಿರುಗಾಡಿದ್ದೇನೆ. ಅದು ಯಾವಾಗ?

ಅಮ್ಮನೊಟ್ಟಿಗೆ ಇಲ್ಲಿ ಕೆಲಸಕ್ಕೆ ಸೇರಿದಾಗ ನನಗೆ ಹದಿನಾಲ್ಕು ವರ್ಷ. ಕಾಮತರಿಗೆ ಎರಡು ವರ್ಷ. ಅದರ ನಂತರ ಏನೇನೋ ಆಗಿ ಹೋಯಿತು! ನನ್ನ ಮದುವೆಯಾಯಿತು. ಐದು ಹೆಣ್ಣುಮಕ್ಕಳು, ಒಬ್ಬ ಗಂಡುಮಗ ಹುಟ್ಟಿದರು. ಕಾಲಕ್ಕನುಗುಣವಾಗಿ ಹೆಣ್ಣುಮಕ್ಕಳ ಮದುವೆ ಮಾಡಿಕೊಟ್ಟಾಯಿತು. ಮಗ ನನ್ನನ್ನು ಬಿಟ್ಟು ಹೋದ. ಗಂಡ ಕೆರೆಯಲ್ಲಿ ಮುಳುಗಿ ಸತ್ತುಹೋದ. ಆಮೇಲೆ ನಾನು ನನ್ನ ಬದುಕನ್ನು ಇಲ್ಲಿಯ ಕೆಲಸಕ್ಕೆ ಒಪ್ಪಿಸಿಕೊಂಡು ಬಿಟ್ಟೆ. ಕಂಕುಳಲ್ಲಿ ಎತ್ತಿ ತಿರುಗಾಡಿಸಿದ ಹುಡುಗ ಬೆಳೆದು ಯಜಮಾನನಾದ. ಆಮೇಲೆ ತಂದೆಯಾದ. ಈಗ ಅವನ ಕೂದಲು ಹಣ್ಣಾಗಿದೆ! ಓ.. ಭುಂಡಿ ನಿಟ್ಟುಸಿರು ಬಿಟ್ಟಳು. ಕಾಲ ಹೇಗೆ ಓಡುತ್ತಿದೆ..

ಕೊಡವನ್ನು ಮತ್ತೆ ಹೊಳೆಯಲ್ಲಿ ಮುಳುಗಿಸಿ ನೀರು ತುಂಬಿಕೊಂ
ಭುಂಡಿ ಅದನ್ನು ಪಾತ್ರೆಯ ಮೇಲೆ ಸುರಿದಳು. ಬಟ್ಟಲಿಗೆ ಅಂಟಿಕೊಂಡಿ
ಎಂಜಲು ಕಣಗಳು ನೀರನ್ನು ಹೀರಿ ಉಬ್ಬಿ ಉದುರಿ ಬೀಳುವುದರಿಂ
ಪಾತ್ರೆಯನ್ನು ಉಜ್ಜಿ ತೊಳೆಯುವುದು ಸುಲಭ.

ಮರದ ಎಲೆಗಳ ನಡುವೆ ತೂರಿ ಬರುವ ಬೆಳಕು ಸುತ್ತಮು
ಹರಡಿಕೊಂಡಿದೆ. ಆದರೆ ಸೂರ್ಯ ಮಾತ್ರ ಈಗಲೂ ಕಣ್ಣಿಗೆ ಕಾಣಿಸುತ್ತಿಲ್ಲ
ಉದಯ ಕಾಲದ ಕೆಂಬಣ್ಣ ಕರಗಿಹೋಗಿದೆ. ನೀಲಿಯೂ ಕಡಿಮೆಯಾಗಿದ
ಆದರೆ ಚಳಿಗಾಳಿ ಮಾತ್ರ ಹಾಗೆಯೇ ಇದೆ. ಮನೆಯೊಳಗೆ ಬಂದ ಭುಂ
ಪೊರಕೆ ಹಿಡಿದು ಕೋಣೆ ಗುಡಿಸಲಾರಂಭಿಸಿದಳು. ಸುಣ್ಣ ಹಚ್ಚಿದ
ವೀಳೆದೆಲೆಯಲ್ಲಿ ಅಡಿಕೆ ಮತ್ತು ಹೊಗೆಸೊಪ್ಪು ಸೇರಿಸಿ ಕುಟ್ಟುತ್ತಿದ್ದ ಕಾಮತ
ತಾಯಿ ಪೊರಕೆ ಹಿಡಿದು ಬಂದ ಭುಂಡಿಯನ್ನು ನೋಡಿ ಕೇಳಿದರು,

"ಕಸ ತೆಗಿತಿದ್ದಿಯಾ ಭುಂಡೆ?"

"ಹೌದು, ಮಾಲಕಿನ್!"

"ಸರಿ, ತೆಗಿ...ತೆಗಿ," ಕುಟ್ಟಿದ ವೀಳೆದೆಲೆಯನ್ನು ಐದೂ ಬೆರಳಿಂದ ಎತ್ತಿ
ಬಾಯಿಗೆ ಎಸೆಯುತ್ತಾ ಕೇಳಿದರು. "ನಿನ್ನ ಮಗನ ಪತ್ರ-ಗಿತ್ರ ಏನಾದರೂ
ಇದೆಯಾ?"

"ನನ್ನ ಮಗನ ಪತ್ರವೇ?" ಭುಂಡಿ ನಕ್ಕುಬಿಟ್ಟಳು. ಪತ್ರ? ಅದೂ ನನ್ನ
ಮಗನದು? ಅವನು ಎಲ್ಲಿದ್ದಾನೋ ಯಾರಿಗೊತ್ತು? ಅವನಿಗೆ ನನ್ನ ಕಾಳಜಿ
ಇರಬೇಕಲ್ಲ! ಇಲ್ಲಿದ್ದಾಗ ಕಳ್ಳು ಕುಡಿದು ನನಗೆ ಹೊಡೆಯುವುದಕ್ಕೆ ಕೂಡಾ
ಹಿಂದೆ ಮುಂದೆ ನೋಡದವನು. ಇನ್ನು ಕಾಗದ ಬರೆಯುವುದು ಎಲ್ಲಿ
ಬಂತು?

"ಹಣವೇನಾದರೂ ಕಳುಹಿಸುತ್ತಾನಾ?"

ಭುಂಡಿಗೆ ಅಸಹನೆ ಉಂಟಾಯಿತು. "ನಿಮಗೆ ಗೊತ್ತಿಲ್ಲವೇ ಮಾಲಿಕಿನ್?
ಅವನು ಹೋಗಿ ಎಷ್ಟು ವರ್ಷಗಳಾದವು? ನನ್ನ ಮಗಳು ಸತ್ತಾಗ ಕೂಡಾ
ಬಂದವನಲ್ಲ ಮುಂಡೇ ಮಗ.."

"ಇರಲಿ ಭುಂಡಿ, ಇರಲಿ. ಬೆಳಿಗ್ಗೆಬೆಳಿಗ್ಗೆ ಕೆಟ್ಟ ಮಾತು ಆಡಬೇಡ"

ಭುಂಡಿ ನಾಲಿಗೆ ಕಚ್ಚಿಕೊಂಡಳು. ಬೈಯ್ಯಬೇಡ ಅಂತಾರೆ, ಬೇರೇನು ಮಾಡಲಿ? ಇಂತಹವರನ್ನು ಹುಟ್ಟಿಸುವುದೇ ತಪ್ಪು, ಪಾಪ! ಮುದಿಪ್ರಾಯದಲ್ಲಿ ನಮಗೆ ಆಧಾರ ಆಗ್ತಾರೆ ಅಂತ ಜನ್ಮ ನೀಡುವುದು, ಇವರಿಗೇನು! ಈ ಮಗ ಕಳ್ಳು ಕುಡಿಯುತ್ತಾ, ಜಗಳವಾಡುತ್ತಾ ಈಗ ಎಲ್ಲಿ ಹಾಳಾಗಿದ್ದಾನೋ. ಚೆನ್ನಾಗಿದ್ದ ಮೂರನೆಯ ಮಗಳು ಮೊದಲ ಹೆರಿಗೆಯಲ್ಲಿಯೇ ತೀರಿಕೊಂಡಳು. ನನ್ನ ಹಣೆಬರಹ. ಮೊಮ್ಮಗಳು ಇದ್ದಾಳೆ ಎನ್ನುವುದೇ ಸಮಾಧಾನ. ಬೇರೆಯವರ ಮಕ್ಕಳನ್ನು ಸಾಕುವುದು ಸುಲಭವೇ? ಭುಂಡಿ ನಿಟ್ಟುಸಿರಿಟ್ಟಳು. ಮೊಮ್ಮಗಳು ಜೊತೆಯಲ್ಲಿ ಇದ್ದಾಳೆ ಎನ್ನುವುದೇ ಒಂದು ಭಾಗ್ಯ. ಹುಡುಗಿ ನೋಡಲು ಚೆನ್ನಾಗಿದ್ದಾಳೆ. ಮೈಕೈ ತುಂಬಿಕೊಂಡಿದ್ದಾಳೆ. ಕೆಲಸ ಏನೇ ಇದ್ದರೂ ಚಟಪಟನೆ ಮಾಡಿ ಮುಗಿಸುತ್ತಾಳೆ. ಎಲ್ಲರೂ ಅವಳನ್ನು ಹೊಗಳ್ತಾರೆ. ಆದರೆ ಭುಂಡಿಗೆ ಮಾತ್ರ ಭಯ- ಹುಡುಗಿ ವಯಸ್ಸಿಗೆ ಬಂದಿದ್ದಾಳೆ. ಇನ್ನು ಎರಡು ಮೂರು ವರ್ಷಗಳಲ್ಲಿ ಮದುವೆ ಮಾಡಿಕೊಡಬೇಕು, ನೋಡೋಣ.

ಪಕ್ಕದ ಕೋಣೆಯಲ್ಲಿ ಸಣ್ಣ ಯಜಮಾನಿ ಮಲಗಿದ್ದಾರೆ. ಭುಂಡಿಗೆ ಕೆಟ್ಟದೆನಿಸಿತು. ಗಂಟೆ ಏಳಾಗುವುದರಲ್ಲಿದೆ, ಇವರು ಇನ್ನೂ ಸ್ವಸ್ಥವಾಗಿ ಮಲಗಿಕೊಂಡಿದ್ದಾರೆ! ಈಗ ಕಾಮತರ ತಂದೆ ಏನಾದರೂ ಇದ್ದರೆ ಇವರ ತಲೆಯ ಮೇಲೆ ತಣ್ಣೀರನ್ನೇ ಸುರಿದು ಬಿಡುತ್ತಿದ್ದರು! ಹಾಗಂತ ಅವರು ಇದ್ದಾಗ ಏಳು-ಎಂಟು ಗಂಟೆಯವರೆಗೆ ಮಲಗಿಕೊಂಡಿರುವುದು ಯಾರಿಗೆ ಸಾಧ್ಯವಾಗುತ್ತಿತ್ತು. ಭುಂಡಿಗೆ ಈಗಲೂ ನೆನಪಿದೆ, ತಾನು ಅಮ್ಮನೊಟ್ಟಿಗೆ ಕೆಲಸಕ್ಕೆ ಬರುವಾಗ ಕಾಮತರ ತಂದೆ ಎದ್ದು ಸ್ನಾನ ಮುಗಿಸಿ ಸಂಧ್ಯಾವಂದನೆಗೆ ತಯಾರಾಗುತ್ತಿದ್ದರು. ಅಷ್ಟೊತ್ತಿಗೆ ದೊಡ್ಡ ಯಜಮಾನಿ ಎದ್ದು ಸಂಧ್ಯಾವಂದನೆ ಕೋಣೆಯನ್ನು ಗುಡಿಸಿ ಸಾರಿಸಿ ಇಡದಿದ್ದರೆ ಅವರು ಗಲಾಟೆ ಎಬ್ಬಿಸುತ್ತಿದ್ದರು. ಇನ್ನು ಈ ಕಾಮತರ ಹೆಂಡತಿಯೋ-

"ಏನು ಯಜಮಾನ್ತಿ, ಇನ್ನೂ ನಿದ್ದೆ ಮುಗಿದಿಲ್ವಾ?" ಭುಂಡಿ ಛೇಡಿಸಿದಳು.

ಕಾಮತರ ಪತ್ನಿ ಕಣ್ಣರಳಿದಳು, "ಓ ಭುಂಡೆ!"

ಬೇರೆ ಯಾರಾದರೂ ಆಗಿದ್ದರೆ ಭುಂಡಿಯ ಮಾತಿಗೆ ಮುಖ ಉಬ್ಬಿಸಿಕೊಳ್ಳುತ್ತಿದ್ದರು. ಸಿಟ್ಟಿಗೇಳುತ್ತಿದ್ದರು. ಆದರೆ ಭುಂಡಿ ಸಾಧಾರಣ ಕುಣಬಿ ಅಲ್ಲ. ಅವಳು ಅವರ ತಾಯಿಯ ಹಾಗೆ. ಈ ಮನೆಗೆ ನಲ್ವತ್ತು ವರ್ಷಗಳಿಂದ ಪರಿಚಿತೆ. ಈ ಕುಟುಂಬದ ಇತಿಹಾಸದಲ್ಲಿ ಬೆರೆತುಕೊಂಡವಳು. ಅವರ ಕಷ್ಟದಲ್ಲಿ ಅವಳು ಖೇದವನ್ನು ಅನುಭವಿಸಿದ್ದಾಳೆ. ಅವರ ಸುಖದಲ್ಲಿ ಅವಳು ಖುಷಿಯನ್ನೂ ತಳೆದಿದ್ದಾಳೆ. ಅವರ ಪ್ರೀತಿಯಲ್ಲಿ ಅವಳ ಬದುಕು ಹೆಣೆದುಕೊಂಡಿದೆ.

"ಗಂಟೆ ಎಷ್ಟಾಯ್ತು ಭುಂಡೆ?"

"ಗಂಟೆ ಏಳು. ಎದ್ದೇಳಿ, ಎದ್ದೇಳಿ" ಭುಂಡಿ ಗಡಬಡಿಸಿದಳು.

ಕಾಮತರ ಹೆಂಡತಿ ಆಕಳಿಸುತ್ತಾ ಎದ್ದು ನಿಂತಳು. ಅವಳು ಮಲಗಿದ ಹಾಸಿಗೆಯನ್ನು ಸುತ್ತಿಡಲು ಬಂದ ಭುಂಡಿಯ ನೆರಿಗೆಗಟ್ಟಿದ ಒಣಕೈಗಳನ್ನು ನೋಡಿ ಅವಳಿಗೆ ಸಂತಾಪವೆನಿಸಿತು. "ಬೇಡ ಬಿಡು ಭುಂಡೆ, ನಾನೇ ಸುತ್ತಿಡುತ್ತೇನೆ, ಬಿಡು."

"ಬಿಡಿ ಯಜಮಾನ್ತಿ. ನಾನು ಸುತ್ತಿ ಇಡುತ್ತೇನೆ. ಇದು ಇವತ್ತು ನಿನ್ನೆಯ ಮಾತೇನು? ನಲ್ವತ್ತು ವರ್ಷಗಳಿಂದ ನಾನು ಇದನ್ನು ಮಾಡಿಬಂದಿದ್ದೇನೆ. ಹೊರಡಿ ಯಜಮಾನ್ತಿ, ಸ್ವಲ್ಪ ಚಹ ಮಾಡಿಕೊಡಿ"

ಕಾಮತರ ಪತ್ನಿ ಒಳಗೆ ಹೋದಳು. 'ಈ ಭುಂಡಿ ಮನೆಯ ಎಲ್ಲಾ ಕೆಲಸವನ್ನು ತಾನೇ ಮಾಡುವ ಹಠವನ್ನು ಮಾತ್ರ ಇದುವರೆಗೆ ಬಿಟ್ಟಿಲ್ಲ. ಇಷ್ಟು ವಯಸ್ಸಾದರೂ ಮನೆಗೆ ಹೋಗಿ ವಿಶ್ರಾಂತಿ ತೆಗೆದುಕೊಳ್ಳಬೇಕೆನ್ನುವ ಇಚ್ಛೆ ಇವಳಿಗಿಲ್ಲ.' ಅವಳು ಕಾಳಜಿಪೂರ್ವಕವಾಗಿ ಭುಂಡಿಯನ್ನು ನೆನೆದಳು.

ಮಂಚದ ಮೇಲೆ ಹಾಸಿಗೆ ಸುತ್ತಿಟ್ಟ ಭುಂಡಿ ಪೊರಕೆ ಹಿಡಿದು ಗುಡಿಸುವ ಕೆಲಸ ಪ್ರಾರಂಭಿಸಿದಳು. ನಂತರ ಕಸವನ್ನೆಲ್ಲಾ ಒಟ್ಟು ಮಾಡಿ ಹೊರಗೆ ಎಸೆದು ಬಂದವಳು ಪಕ್ಕದ ಕೋಣೆಯನ್ನು ಪ್ರವೇಶಿಸಿದಳು. ಅಲ್ಲಿ ಬಾಗಿಲಿನ ಬಳಿ ಮಂಚದ ಮೇಲೆ ಗೋಡೆಗೆ ಅವುಚಿಕೊಂಡು ರಾಜ ಮಲಗಿದ್ದ. ಕಿಟಕಿ,

ಬಾಗಿಲು ಎಲ್ಲಾ ಮುಚ್ಚಿದ್ದರಿಂದ ಆ ಕೋಣೆಯಲ್ಲಿ ಕತ್ತಲು ಅವರಿಸಿಕೊಂಡಿತ್ತು. ಭುಂಡಿ ಎದ್ದು ಹೋಗಿ ಕಿಟಕಿ ತೆರೆದಳು. ಬೆಳಕು ಪ್ರವೇಶಿಸಿತು. ತಿರುಗಿಕೊಂಡಾಗ ಅವಳ ದೃಷ್ಟಿ ರಾಜನ ಮೇಲೆ ನೆಟ್ಟಿತು. ಅವನು ಬರೀ ಚಡ್ಡಿಯಲ್ಲಿ ಮಲಗಿದ್ದ. ಅವನನ್ನು ನೋಡಿ ಅವಳ ಎದೆ ತುಂಬಿ ಬಂತು. ಹುಡುಗ ಬೆಳೆದಿದ್ದಾನೆ. ತರುಣನಾಗಿದ್ದಾನೆ. ರೋಮ ತುಂಬಿದ ಎದೆ ಅಗಲವಾಗಿ ಸೆಟೆದುಕೊಂಡಿದೆ. ಮೂಗಿನ ಕೆಳಗೆ ಕೂದಲು ಬೆಳೆದಿದೆ. ತೋಳು, ತೊಡೆಗಳು ತುಂಬಿಕೊಂಡಿವೆ. ಅವನ ತೊಡೆಯ ಮೇಲಿರುವ ಅಂಗೈಯಗಲದ ಕಪ್ಪು ಮಚ್ಚೆಯ ಮೇಲೆ ಅವಳ ನೋಟ ಹರಿಯಿತು.

ಅವಳ ಹೃದಯ ದ್ರವಿಸಿತು. ಅವಳಿಗೆ ಅಭಿಮಾನವೆನಿಸಿತು. ನನ್ನ ರಾಜ! ನನ್ನ ಎದೆಹಾಲು ಕುಡಿದು ಬೆಳೆದ ಪೋರ. ನನ್ನ ದೇಹದ ರಸವನ್ನು ಹೀರಿ, ನನ್ನ ಹೃದಯದ ಪ್ರೀತಿ ತೆಗೆದುಕೊಂಡು ದೊಡ್ಡವನಾಗಿದ್ದಾನೆ.

ಅವನು ಹುಟ್ಟಿದಾಗ ಅವನ ತಾಯಿಗೆ ಅಪರೇಶನ್ ಆಗಿತ್ತು. ಅವರು ಆಸ್ಪತ್ರೆಯಲ್ಲಿದ್ದಾಗಲೇ ದೊಡ್ಡ ಯಜಮಾನ್ತಿ ಅವಳನ್ನು ಕರೆದು ಹೇಳಿದ್ದರು, 'ಭುಂಡೆ, ನಿನಗೆ ಹಾಲು ಬರುತ್ತಿದ್ದರೆ ಈ ಮಗುವಿಗೂ ಕೊಡು' ನಾನಂತೂ ಖುಷಿಯಿಂದಲೇ ಕೊಟ್ಟೆ. ಆಗ ನನ್ನ ಮಗಳಿಗೆ ಎರಡು ವರ್ಷ. ಇನ್ನೂ ಅವಳಿಗೆ ಹಾಲೂಡಿಸುತ್ತಿದ್ದೆ. ತಲೆ ತುಂಬಾ ಕೂದಲಿರುವ ಈ ಅಚ್ಚ ಬಿಳಿ ಕೂಸನ್ನು ಮೊದಲ ಬಾರಿ ಕೈತ್ತಿಕೊಂಡು ಅವನ ಮುಖವನ್ನು ಎದೆಗವಚಿಕೊಂಡಾಗ ನನ್ನ ಕೈ ನಡುಗುತ್ತಿದ್ದವು. ಆಗಲೇ ನಾನು ನೋಡಿದ್ದು- ಮಗುವಿನ ಬಲ ತೊಡೆಯ ಮೇಲೆ ಇದ್ದ ಕಪ್ಪು ಮಚ್ಚೆ. ದೊಡ್ಡ ಯಜಮಾನ್ತಿ ಮತ್ತು ಕಾಮತರನ್ನು ಕರೆದು ತೋರಿಸಿದ್ದೆ-

"ಹುಡುಗನ ಕಾಲಿನ ಮೇಲಿರುವ ಮಚ್ಚೆಯನ್ನು ನೋಡಿದ್ದೀರಾ? ಇವ ನಮಗೆ ಯಶಸ್ಸನ್ನು ತರಲಿದ್ದಾನೆ" ಆ ಮಚ್ಚೆ ಬೆಳೆಯುತ್ತಿದ್ದ ಹಾಗೆ ನನ್ನ ಪ್ರೀತಿ ಕೂಡಾ ಬೆಳೆಯಿತು.

ಭುಂಡಿಗೆ ಅನಿಸಿತು, ಮಂಚ ಹತ್ತಿ ಆಗಿನಂತೆ ಅವನನ್ನು ತೊಡೆಯಲ್ಲಿ ಮಲಗಿಸಿಕೊಂಡು, ಅವನ ತಲೆಯನ್ನು ಅಂಗೈಯಲ್ಲಿ ಹಿಡಿದು ಹಾಲು ಕೊಡಬೇಕು. ಇಲ್ಲದಿದ್ದರೆ ಅವನನ್ನು ಎತ್ತಿ, ಅವನ ಕೂದಲಲ್ಲಿ ಬೆರಳಾಡಿಸಿ,

ಅವನ ಗಲ್ಲಕ್ಕೆ ತುಟಿಯೊತ್ತಬೇಕು. ಆದರೆ ಕ್ಷಣ ಮಾತ್ರದಲ್ಲಿ ಅವಳು ಎಚ್ಚರಗೊಂಡಳು – ಇವ ನಿನ್ನ ಸ್ವಂತ ಮಗನಲ್ಲ. ಇಪ್ಪತ್ತ್ಮೂರು ವರ್ಷಗಳ ಹಿಂದೆ ನೀನು ಇವನನ್ನು ಎತ್ತಿ ತಿರುಗಾಡಿಸಿದ್ದಿ. ಈಗ ಇವನು ನಿನ್ನ ಹಾಲು ಕುಡಿಯುವ, ನಿನ್ನ ಮೈ ಒದ್ದೆ ಮಾಡುವ ಮಗುವಲ್ಲ. ಇಪ್ಪತ್ತ್ಮೂರು ವರ್ಷದ ತರುಣ– ಭುಂಡಿ ನಿಟ್ಟುಸಿರಿಟ್ಟಳು. ಮಂಚದ ಮೇಲೆ ಅಸ್ತವ್ಯಸ್ತವಾಗಿ ಬಿದ್ದಿದ್ದ ಹೊದಿಕೆಯನ್ನು ಎತ್ತಿ ಅವನಿಗೆ ಹೊದಿಸಿದಳು. ಆಮೇಲೆ ಕೈಯಲ್ಲಿ ಹಿಡಿದ ಪೊರಕೆಯಿಂದ ಕೆಲಸ ಪ್ರಾರಂಭಿಸಿದಳು.

ಸೂರ್ಯ ನೆತ್ತಿ ಮೇಲೆ ಬಂದಿದ್ದಾನೆ. ಕಾವೇರಿದ ಬಿಸಿಲಿನ ಝಳ ಮರದಿಂದ ಇಳಿದು ಮನೆಯನ್ನು ಆವರಿಸಿಕೊಂಡಿದೆ. ಹೊಳೆ ನೀರಿನಲ್ಲಿ ಮರಗಳ ಪ್ರತಿಬಿಂಬ ಮೂಡಿದೆ. ಬಿಸಿಲು ಮತ್ತು ನೆರಳಿನ ಕಣ್ಣುಮುಚ್ಚಾಲೆಯಾಟ ನಡೆದಿದೆ. ಇಡೀ ಪ್ರಕೃತಿ ನಿಶ್ಚಲವಾಗಿದೆ. ದೂರದಲ್ಲೆಲ್ಲೋ ಅರಳಿ ಮರದ ಎಲೆಗಳು ಮಾತ್ರ ಭೂತದರ್ಶನವಾದಂತೆ ನಡುಗುತ್ತಿವೆ.

ಭುಂಡಿ ತೆರೆದ ಮನಸ್ಸಿನಿಂದ ಹೊಳೆ ತೀರಕ್ಕೆ ಹೋಗಿ ಪಾತ್ರೆ ತಿಕ್ಕಲಾರಂಭಿಸಿದಳು. ಹೊಟ್ಟೆ ತುಂಬಾ ಉಂಡದ್ದರಿಂದ ಮತ್ತು ಬಿಸಿಲಿನ ಝಳಕ್ಕೆ ಅವಳ ಕಣ್ಣು ತನ್ನಷ್ಟಕ್ಕೆ ಮುಚ್ಚಿಕೊಳ್ಳುತ್ತಿತ್ತು.

ಶಕೂ ಬಂದಿಲ್ಲ. ಹೀಗಾಗಿ ಇವತ್ತು ಬಟ್ಟೆ ಒಗೆಯುವುದು, ಹಿಂಡುವುದು ಯಾವುದೂ ನಡೆಯುವಂತಿಲ್ಲ. ಬಟ್ಟೆ ಒಗೆಯಲು ನನಗೇನು ಹದಿನಾರು ವರ್ಷ ಪ್ರಾಯವೇ? ದೇವರ ದಯೆಯಿಂದ ಸಧ್ಯ ಕುರುಡಿನೋ ಕಿವುಡಿನೋ ಆಗಿಲ್ಲ. ಹಲ್ಲು ಬಿದ್ದುಹೋಗಿದೆ. ಚರ್ಮ ಸುಕ್ಕುಗಟ್ಟಿದೆ. ದೇಹ ಮೆದುವಾಗಿದೆ. ಹಿಂದಿನಂತೆ ಓಡಿಯಾಡುವುದು ಸಾಧ್ಯವಿಲ್ಲ ವಯಸ್ಸಾಯಿತಲ್ಲ? ಈಗಿನ ಮಕ್ಕಳು ನನ್ನ ವಯಸ್ಸಿನಲ್ಲಿ ಹೇಗೆ ಇರುತ್ತಾರೋ ನೋಡೋಣ.

ಹಾಗೆ ಅಂದುಕೊಳ್ಳುವಾಗ ಭುಂಡಿಗೆ ತನ್ನ ಮೊಮ್ಮಗಳ ನೆನಪಾಯಿತು. ಇತ್ತೀಚಿಗೆ ಅವಳಿಗೆ ತಲೆನೋವು ಬರುತ್ತಿದೆ. ಏನಾಗಿದೆಯೋ ಆ ದೇವರೇ ಬಲ್ಲ. ಇವತ್ತಾದರೂ ವೈದ್ಯರಿಗೆ ತೋರಿಸಬೇಕು.

ಪಾತ್ರೆ ತಿಕ್ಕಿ ಮುಗಿಸಿದ ಭುಂಡಿ ಎದ್ದು ನಿಂತಳು. ಹೊಳೆಗೆ ಹೋಗಿ ಕೊಡದಲ್ಲಿ ನೀರು ತುಂಬಿದಳು. ತಿಕ್ಕಿದ ಪಾತ್ರೆಗಳನ್ನು ನೀರಿನಿಂದ ತೊಳೆದಳು. ಆಮೇಲೆ ಅವುಗಳನ್ನೆಲ್ಲಾ ತಂದು ಅಡುಗೆ ಮನೆ ಅಲಮಾರಿಯಲ್ಲಿ ಜೋಡಿಸಿಟ್ಟಳು. ಇನ್ನು ದೊಡ್ಡ ಕೆಲಸ ಯಾವುದೂ ಉಳಿದಿಲ್ಲ. ಕಾಮತರ ಪತ್ನಿ ಮತ್ತು ತಾಯಿ ಮಲಗಿದ್ದಾರೆ. ರಾಜ ಹೊರಗೆಲ್ಲೋ ಹೋಗಿದ್ದಾನೆ.

ಭುಂಡಿ ಹಿತ್ತಿಲ ಬಾಗಿಲು ಮುಚ್ಚಿದಳು. ಇನ್ನು ಹಿಂದಿನಂತೆ ಕೆಲಸ ಮಾಡುತ್ತಾ ಇರಬಾರದು. ಹತ್ತು ಹನ್ನೆರಡು ವರ್ಷಗಳ ಹಿಂದೆಯಾಗಿದ್ದರೆ ಮಧ್ಯಾಹ್ನದ ಹೊತ್ತು ಕೂಡಾ ಅವಳು ಸುಮ್ಮನೆ ಕೂಡುತ್ತಿರಲಿಲ್ಲ. ಅವಳಿಗೆ ಏನಾದರೂ ಮಾಡುತ್ತಲೇ ಇರಬೇಕಿತ್ತು– ಹಿಟ್ಟು ರುಬ್ಬುವುದು, ಅಕ್ಕಿ ಆರಿಸುವುದು ಅಥವಾ ಬೇರೆ ಏನಾದರೂ. ಇಲ್ಲಿ ಕೆಲಸವಿಲ್ಲದ ದಿನಗಳಲ್ಲಿ ತನ್ನ ಮನೆಯ ಕೆಲಸವಂತೂ ಇದ್ದೇ ಇರುತಿತ್ತು. ಈಗ ಹಾಗೆಲ್ಲಾ ಮೈಬಗ್ಗಿಸಿ ದುಡಿಯುವಷ್ಟು ತ್ರಾಣ ಉಳಿದಿಲ್ಲ. ಬೆಳಿಗಿನ ಕೆಲಸ ಮುಗಿಯುವಷ್ಟರಲ್ಲಿ ಸುಸ್ತು ಕಾಣಿಸುತ್ತದೆ. ಬಿಸಿಲಲ್ಲಿ ಹೊರಗೆ ಅಡ್ಡಾಡುವುದೆಂದರೆ ಜೀವ ತಳಮಳಿಸುತ್ತದೆ. ಮಧ್ಯಾಹ್ನ ಸ್ವಲ್ಪ ಹೊತ್ತು ಮಲಗುವುದು ಅಭ್ಯಾಸವಾಗಿದೆ. ಅವಳು ನೆಲದ ಮೇಲೆ ಸೀರೆಯ ಸೆರಗನ್ನು ಹಾಸಿ ಅಡ್ಡಾದಳು. ನಿದ್ದೆ ಬರಲಿಲ್ಲ. ಮನಸ್ಸು ಯೋಚಿಸತೊಡಗಿತು. ಇನ್ನು ಎಷ್ಟು ಕಾಲ ಹೀಗೆ ಕಳೆಯುತ್ತೇನೋ ಯಾರಿಗೊತ್ತು? ಈ ಮನೆಯ ಮೂರು ಪೀಳಿಗೆಗಳನ್ನು ಕಂಡ ಹಾಗಾಯಿತು. ಅವರ ಚಾಕರಿ ಮಾಡುತ್ತಾ ಬಂದದ್ದಾಯಿತು. ಎಷ್ಟು ಸಾಧ್ಯವೋ ಅಷ್ಟು ಕಾಲ ನನ್ನ ಕಾಲ ಮೇಲೆ ನಿಂತು ದಿನ ಕಳೆಯುವುದು. ಆಮೇಲೆ ಏನಾಗುವುದೋ ಆಗಲಿ. ಆದರೆ ಶಕೂವನ್ನು ಒಳ್ಳೆಮನೆಗೆ ಸೇರಿಸುವುದು ಬಾಕಿ ಇದೆ. ಅದು ಕಷ್ಟದ ಕೆಲಸವೇನೂ ಅಲ್ಲ. ಯಾರ ಸಹಾಯವೂ ಇಲ್ಲದೆ ಐದು ಮಂದಿ ಹೆಣ್ಣುಮಕ್ಕಳಿಗೆ ಮದುವೆ ಮಾಡಿಕೊಟ್ಟಿದ್ದೇನೆ. ಈಗ ಅವರು ಅನುಭವಿಸುತ್ತಿರುವ ಸುಖ ದುಃಖ ಅವರ ಹಣೆಯಲ್ಲಿ ಬರೆದದ್ದು. ಮೂರನೇ ಮಗಳು ಶಕೂವಿನ ಹೆರಿಗೆಯಲ್ಲಿ ತೀರಿಕೊಂಡಳು. ತಾಯಿಯ ಕೊರತೆ ತಿಳಿಯುವುದು ಬೇಡವೆಂದು ನಾನೇ ಆ ಮಗುವನ್ನು ಸಾಕಿ ಬೆಳೆಸಿದೆ. ಇನ್ನು ಸುಮ್ಮನೆ ಹೇಳಬಾರದಲ್ಲ! ಹುಡುಗಿ ನಾನು ಅಂದುಕೊಂಡ ಹಾಗೆ ಬೆಳೆದಿದ್ದಾಳೆ. ಅವಳಿಗೆ ಎರಡು–ಮೂರು ವರ್ಷಗಳಲ್ಲಿ ಗಂಡು ಹುಡುಕಬೇಕು. ನನಗೆ ಕಷ್ಟವಾಗಲಿಕ್ಕಿಲ್ಲ. ಹುಡುಗಿ ನೋಡಲು ಚೆನ್ನಾಗಿದ್ದಾಳೆ. ಕಪ್ಪು

ಬಣ್ಣವಾದರೂ ಒಮ್ಮೆ ನೋಡಿದರೆ ಮತ್ತೊಮ್ಮೆ ನೋಡಬೇಕೆನ್ನುವ ಹಾಗಿದ್ದಾಳೆ...ತನ್ನ ಆಲೋಚನೆಯ ಧಾಟಿಯನ್ನು ನೆನೆದು ಅವಳಿಗೇ ನಗುಬಂತು.

ನಿಲ್ಲು, ನಿಲ್ಲು..ಭುಂಡೀ, ಅವಸರ ಯಾಕೆ ಮಾಡ್ತಿ. ಹುಡುಗಿಗೆ ಇನ್ನೂ ಹದಿನೇಳು ವರ್ಷ ಮಾತ್ರ, ಈಗಲೇ ಅವಳ ಮದುವೆಯ ಕುರಿತು ಯಾಕೆ ಈ ಆತಂಕ?

ಅವಳಿಗೆ ತಟ್ಟನೆ ಎಚ್ಚರವಾಯಿತು. ನಾನು ತುಂಬಾ ಹೊತ್ತು ಮಲಗಿ ಬಿಟ್ಟೆನಾ? ಗಂಟೆ ಎಷ್ಟಾಗಿರಬಹುದು? ಅಂಗಳದತ್ತ ದೃಷ್ಟಿ ಬೀರಿ ಬಿಸಿಲು, ನೆರಳಿನ ಉದ್ದ ಅಳೆದು ನೋಡಿದರೆ ಮೂರು-ನಾಲ್ಕು ಗಂಟೆ ಆಗಿರಬಹುದು. ಎದ್ದು ಬಂದಾಗ ಕಾಮತರ ಪತ್ನಿ ಒಲೆಯ ಬಳಿ ನಿಂತು ಚಹಾ ತಯಾರಿಸುವುದು ಕಂಡಿತು. ಅವಳು ಹೊಳೆಗೆ ಹೋಗಿ ಬೊಗಸೆಯಲ್ಲಿ ನೀರು ತುಂಬಿ ಮುಖ ತೊಳೆದಳು. ಮೇಲೆ ಹತ್ತಿ ಬರುವಾಗ ಶಕೂವನ್ನು ವೈದ್ಯರಿಗೆ ತೋರಿಸುವ ಆಲೋಚನೆ ಬಂತು. ಮುಂಜಾನೆ ಹೊರಟು ನಿಂತಾಗ ತಲೆ ನೋವು ಎಂದಿದ್ದಳು. ಯಾವಾಗಲೂ ಇದನ್ನೇ ಹೇಳುತ್ತಾಳೆ. ಬೆಳಿಗ್ಗೆ ಮಾತ್ರ ಹೀಗೆ ಆಗುವುದೆಂದು ಕಾಣುತ್ತದೆ. ತಲೆ ಸಿಡಿತವೆಂದು ಮಲಗಿಕೊಳ್ಳುವ ಹುಡುಗಿ ಅದೇ ನಾನು ಸಂಜೆ ಹೋಗುವುದರೊಳಗೆ ಚೆನ್ನಾಗಿಯೇ ಇರುತ್ತಾಳೆ. ಆದರೂ ಇದನ್ನು ಹೀಗೆ ಬಿಡಬಾರದು. ವೈದ್ಯರಿಗೆ ತೋರಿಸೋಣ. ಬೇರೆಯವರ ಮನೆ ಸೇರಬೇಕಾಗಿರುವ ಹುಡುಗಿ. ನನ್ನನ್ನು ಅಪರಾಧಿಯಾಗಿ ಕಾಣುವ ಹಾಗೆ ಆಗಬಾರದು.

ಭುಂಡಿ ಅಡುಗೆ ಮನೆಯಲ್ಲಿ ಕಾಲಿರಿಸಿದ ಕೂಡಲೇ ಕಾಮತರ ಪತ್ನಿ ಅವಳಿಗೆ ಚಹಾ ನೀಡಿದರು. ಚಹಾ ಕುಡಿಯುವಾಗ ಭುಂಡಿ ಹೇಳಿದಳು-

"ಮಾಲಕಿನ್ ನಾನು ಹೋಗುತ್ತೇನೆ"

"ಯಾಕೆ ಭುಂಡೆ?" ಕಾಮತರ ಪತ್ನಿಗೆ ಆಶ್ಚರ್ಯವಾಯಿತು. "ಇವತ್ತು ಬೇಗ ಹೋಗ್ತಿಯಾ?"

"ಹುಂ. ಈಗ ಹೋಗಲೇ ಬೇಕು ಮಾಲಕಿನ್. ತಲೆನೋವು ಅಂತ ಹುಡುಗಿ ಒಬ್ಬಳೇ ಇದ್ದಾಳೆ."

"ಶಕೂಗೆ ಆಗಾಗ ತಲೆನೋವು ಬರ್ತಾ ಇದೆಯಲ್ಲಾ ಭುಂಡೆ, ವೈದ್ಯರಿಗೆ ಯಾಕೆ ತೋರಿಸುವುದಿಲ್ಲ?"

"ಇವತ್ತು ಅವಳನ್ನು ವೈದ್ಯರಲ್ಲಿ ಕರೆದುಕೊಂಡು ಹೋಗ್ತೀನಿ ಮಾಲಕಿನ್. ಹೋಗಿ ಬರ್ತೇನೆ."

"ನಿಲ್ಲು, ಭುಂಡೆ" ಕಾಮತರ ಪತ್ನಿ ಪಾತ್ರೆ ತಂದು ಅದರಲ್ಲಿ ಮಧ್ಯಾಹ್ನದ ಅನ್ನ ತುಂಬಿದರು. ಇನ್ನೊಂದು ಸಣ್ಣ ಪಾತ್ರೆಯಲ್ಲಿ ಪಲ್ಯ ಹಾಕಿ ಅದನ್ನು ಅನ್ನದ ನಡುವೆ ಒತ್ತಿಟ್ಟರು. ಉಪ್ಪಿನಕಾಯಿ, ಹಪ್ಪಳ ಸೇರಿಸಿ ಬಾಳೆಲೆಯಿಂದ ಪಾತ್ರೆಯನ್ನು ಮುಚ್ಚಿ ಭುಂಡಿಯ ಕೈಗಿತ್ತರು. ಎಂದಿನಂತೆ ಅದನ್ನು ಎಡಭುಜದ ಮೇಲಿಟ್ಟು ಭುಂಡಿ ಹೊರಟಳು, "ಬರ್ತೀನಿ ಮಾಲಕಿನ್"

ಅವಳ ಕಪ್ಪು ದೇಹ ಸಂಜೆ ನಾಲ್ಕರ ಬಿಸಿಲಿಗೆ ಬೆವರುತ್ತಿದ್ದರೂ, ಅದು ಉರಿಯ ಅನುಭವವನ್ನು ನೀಡದ್ದರಿಂದ ಅವಳಿಗೆ ಹಾಯೆನಿಸಿತು. ಅವಳನ್ನು ಹಿಂಬಾಲಿಸಿ ಅವಳ ನೆರಳು ಕೂಡಾ ಚಲಿಸಿತು.

ರಸ್ತೆಯಲ್ಲಿ ಮಕ್ಕಳು ಆಟವಾಡುತ್ತಿದ್ದರು. ಭುಂಡಿ ಬರುತ್ತಿರುವುದನ್ನು ನೋಡಿಯೂ ಅವರು ದಾರಿ ಬಿಟ್ಟುಕೊಡಲಿಲ್ಲ. ಅವಳು ಆ ಸುಕುಮಾರರ ಮುಖ ನೋಡುತ್ತಾ, ಅವರ ಆಟವನ್ನು ಗಮನಿಸುತ್ತಾ ಮುಂದೆ ಹೆಜ್ಜೆ ಇಟ್ಟಳು. ಹಿಂದಿನಿಂದ ಅವರ ಉತ್ಸಾಹದ ಧ್ವನಿ ಮತ್ತು ನಗು ಬಂದು ಅವಳ ಹೃದಯವನ್ನು ಮುಟ್ಟಿತು.

ರಸ್ತೆ ತಿರುಗಿಕೊಳ್ಳುವಾಗ ಅವಳ ಕಾಲ ಬಳಿ ಇದ್ದ ನೆರಳು ಪಕ್ಕಕ್ಕೆ ಸರಿಯಿತು. ಅವಳಿಗೆ ಎದುರು ಹನುಮಂತ ದೇವರ ಗುಡಿ ಕಂಡಿತು. ಒಳಗೆ ಹೋಗಿ ದೇವರಿಗೆ ಕೈಮುಗಿದು ಬರಬಾರದು ಯಾಕೆ? ಹೋಗೋಣ. ಗುಡಿಯ ಬಾಗಿಲು ಇನ್ನೂ ತೆರೆದಿರಲಿಲ್ಲ. ಬಾಗಿಲು ತೆರೆಯುವವರೆಗೆ ನಿಂತರೆ ಕತ್ತಲೆ ಕವಿಯುತ್ತದೆ. ಹೊರಗಿನಿಂದ ಕೈ ಮುಗಿದರಾಯಿತು.

ಭುಂಡಿಯ ಕಾಲುಗಳು ತಮ್ಮಷ್ಟಕ್ಕೆ ಗುಡಿಯ ಕಡೆಗೆ ಚಲಿಸಿದವು. ಅವಳು ಭುಜದ ಮೇಲಿದ್ದ ಪಾತ್ರೆಯನ್ನು ಕೆಳಗಿಟ್ಟು, ಕಣ್ಣುಮುಚ್ಚಿ ಕೈಜೋಡಿಸಿದಳು, "ದೇವರೇ ರಕ್ಷಿಸು.. ನನ್ನ ಮಗನಿಗೆ ಒಳ್ಳೇ ಬುದ್ಧಿ ಕೊಡು.. ರಾಜನಿಗೆ ಬೇಗನೇ ಕೆಲಸ ಸಿಗುವಂತೆ ಮಾಡು... ಹೆಣ್ಣುಮಕ್ಕಳನ್ನು ಉಪವಾಸ ಇಡಬೇಡ. ಸಲ್ಲು ದೇವರೇ, ಎಲ್ಲರಿಗೂ ಸಲ್ಲುವಂತಾಗು."

ಪಾತ್ರೆ ಎತ್ತಿಕೊಳ್ಳಲು ಬಗ್ಗಿಕೊಂಡಾಗ ಅವಳಿಗೆ ತೀರ್ಥವನ್ನು ಕೊಂಡೊಯ್ಯಬೇಕೆಂಬ ಆಲೋಚನೆ ಬಂತು. ಅವಳು ಪಾತ್ರೆಗೆ ಮುಚ್ಚಿದ ಬಾಳೆಲೆಯನ್ನು ಎತ್ತಿ, ಪಲ್ಯವನ್ನು ಅನ್ನದ ಮೇಲೆ ಸುರಿದು, ಚಿಕ್ಕಪಾತ್ರೆಯನ್ನು ಕೈಗೆತ್ತಿಕೊಂಡಳು. ಅದನ್ನು ಸೆರಗಿನಿಂದ ಒರಸಿ ಗುಡಿಗೆ ಪ್ರದಕ್ಷಿಣೆ ಬಂದಳು. ಗುಡಿಯ ಬಲಬದಿಯ ಗೋಡೆಯ ಹೊರಗೆ ಇರುವ ಗುಂಡಿಯಲ್ಲಿ ಬೆಳಗ್ಗಿನ ಅಭಿಷೇಕದ ನೀರು ಶೇಖರವಾಗಿತ್ತು. ಅದನ್ನು ಅವಳು ಪಾತ್ರೆಯಲ್ಲಿ ತುಂಬಿದಳು. 'ದೇವರೇ, ಶಕೂವಿಗೆ ಒಳ್ಳೆಯದು ಮಾಡು. ನನಗೆ ಇರುವ ಏಕೈಕ ಆಧಾರ ಅವಳು. ಅವಳನ್ನು ಬಿಟ್ಟರೆ ನನ್ನವರೆಂದು ಹೇಳಿಕೊಳ್ಳಲು ಬೇರೆ ಯಾರೂ ಇಲ್ಲ. ಸಲ್ಲು ದೇವರೇ..'

ಅವಳ ಎದೆಯ ಭಾರವಿಳಿಯಿತು. ಉತ್ಸಾಹ ತುಂಬಿ ನಡಿಗೆಯ ವೇಗ ಹೆಚ್ಚಿತು. ಗುಡಿಸಲು ತಲುಪಿದಾಗ ಮುಂಬಾಗಿಲು ಮುಚ್ಚಿರುವುದು ಗೊತ್ತಾಯಿತು. ಹುಡುಗಿ ಮಲಗಿಕೊಂಡಿರಬೇಕು. ಭುಂಡಿಯ ಎದೆಯಲ್ಲಿ ಮಮತೆ ಉಕ್ಕಿಬಂತು. ಒಳಗೆ ಹೋಗಿ ಅವಳ ಹಣೆಯ ಮೇಲೆ ಕೈಯಾಡಿಸ ಬೇಕೆಂಬ ಬಯಕೆ ಹುಟ್ಟಿತು. ಮೆಲ್ಲಗೆ ಬಾಗಿಲನ್ನು ನೂಕಿದಳು– ಹೌದು ಮುಚ್ಚಿದೆ. ಹುಡುಗಿ ಮಲಗಿದ್ದಾಳೆ. ಎಬ್ಬಿಸುವುದು ಬೇಡ. ಎದ್ದ ಮೇಲೆ ತೀರ್ಥ ನೀಡಿದರಾಯಿತು. ಅವಳು ಗುಡಿಸಲಿನ ಹಿಂಭಾಗಕ್ಕೆ ಬಂದಳು. ಅಲ್ಲಿಯ ಬಾಗಿಲನ್ನು ಹೊರಗಿನಿಂದಲೇ ತೆರೆಯಬಹುದು. ಎಡಕೈಯಿಂದ ಭುಜದ ಮೇಲಿರುವ ಪಾತ್ರೆಯನ್ನು ಹಿಡಿದು, ಬಲಗೈಯಿಂದ ಬಾಗಿಲು ದೂಡಿ ಒಳಪ್ರವೇಶಿಸಿದಳು.

ಒಳಕೋಣೆಯ ದೃಶ್ಯ ಅವಳನ್ನು ಬೆಚ್ಚಿಬೀಳಿಸಿತು. ಅವಳ ನೋಟ ಶಕೂವಿನೊಂದಿಗೆ ಬೆಸೆದುಕೊಂಡಿದ್ದ ನಗ್ನ ಕಾಲುಗಳ ಕಡೆಗೆ ಹರಿಯಿತು. ಭುಜದ ಮೇಲಿದ್ದ ಪಾತ್ರೆ ಕೆಳಗುರುಳಿತು. ಬಾಳೆಲೆ ದೂರ ಚಿಮ್ಮಿ ಅನ್ನ ಮತ್ತು ಪಲ್ಯ ನೆಲದ ಮೇಲೆ ಚೆಲ್ಲಾಡಿತು. ತೀರ್ಥ ಹರಿದುಹೋಯಿತು. ಅಲ್ಲಿ ಬಿದ್ದಿರುವ ಕಟ್ಟಿಗೆಯನ್ನೆತ್ತಿ ಅವರಿಬ್ಬರಿಗೂ ಚೆನ್ನಾಗಿ ಥಳಿಸಬೇಕೆಂಬ ನಿರ್ಧಾರ ಅವಳಲ್ಲಿ ಹುಟ್ಟಿತು. ಆದರೆ ವೇದನೆ ತುಂಬಿದ ಅವಳ ಕಣ್ಣುಗಳಿಗೆ ಶಕೂವಿನ ದೇಹವನ್ನು ಆವರಿಸಿಕೊಂಡಿದ್ದ ತೊಡೆಯ ಕಪ್ಪು ಮಚ್ಚೆ ಕಾಣಿಸಿ ಅದರ ಗುರುತು ಹಿಡಿದ ಅವಳು ನಿಂತಲ್ಲಿಯೇ ಕಲ್ಲಾದಳು.



# ಅಪೇಕ್ಷೆ

ಸಾವತ್ರಕ್ಕ ಹಟ್ಟಿಯೊಳಗೆ ಪ್ರವೇಶಿಸಿದಳು. ಅವಳ ಕೈಯಲ್ಲಿದ್ದ ದೀಪದ ಳಕು ಹಟ್ಟಿಯನ್ನು ತುಂಬಿತು. ಸಮಯಬಲದಿಂದ ಅವಳ ನಿರೀಕ್ಷೆಯಲ್ಲಿದ್ದ ಸುಗಳು ಕತ್ತು ತಿರುಗಿಸಿ ಎದ್ದು ನಿಂತವು. ಅವುಗಳ ಕಣ್ಣುಗಳು ೊಳೆಯಲಾರಂಭಿಸಿದವು.

ದೀಪವನ್ನು ಗೋಡೆಗೆ ನೇತುಹಾಕಿದ ಸಾವತ್ರಕ್ಕ ಹಸುಗಳಿಗೆ ಹುಲ್ಲು ಾಕಿದಳು. ಬಾಲ್ದಿಯಲ್ಲಿದ್ದ ನೀರಿಗೆ ತವುಡು ಬೆರೆಸಿ ಕುಡಿಯಲಿಟ್ಟಳು. ಆಮೇಲೆ ಳಗೆ ಕುಳಿತು ಹಸುವಿನ ಕೆಚ್ಚಲಿನ ಮೇಲೆ ನೀರು ಸಿಂಪಡಿಸಿ ಎಣ್ಣೆ ಸವರಿದಳು. ಂತರ ಹಾಲು ಕರೆದಳು. ಸ್ವಲ್ಪ ಹಾಲನ್ನು ಕರುವಿಗೆಂದು ಕೆಚ್ಚಲಲ್ಲಿಯೇ ಟ್ಟು. ಅವುಗಳ ಕುಣಿಕೆ ಸಡಲಿಸಿದಳು. ಹಾಲು ತುಂಬಿದ ತಂಬಿಗೆಯನ್ನು ುನೆಗೆ ತಂದಿಟ್ಟು ಮತ್ತೆ ಹಟ್ಟಿಗೆ ಬಂದು ನೆಲದ ಮೇಲಿದ್ದ ಸೆಗಣಿ ಮೂತ್ರವನ್ನು ೀರಿನಿಂದ ತೊಳೆಯಲಾರಂಭಿಸಿದಳು.

ಸ್ವಲ್ಪ ಹೊತ್ತು ಕಳೆಯುವುದರೊಳಗೆ ಹೊರಗೆ ಬೆಳಗಾಯಿತು. ಬೆಳಕು ರಡಿತು. ಮನೆಯ ಮುಂದಿನ ಅಂಗಳವನ್ನು ಗುಡಿಸಿ ಸ್ವಚ್ಛಗೊಳಿಸಿದ ಾವತ್ರಕ್ಕ ಜಗಲಿ ಮತ್ತು ಒಳಕೋಣೆಯ ಕಸ ಹೊಡೆದಳು. ಈಗ ೇವಸ್ಥಾನದಿಂದ ಮರಳುತ್ತಿರುವವರ ಧ್ವನಿ ಕೇಳಲಾರಂಭಿಸಿತು.

ಹಾಲಿನ ಗಿರಾಕಿಗಳು ಬರುವ ಮೊದಲೇ ಸ್ನಾನ ಮಾಡಬೇಕೆಂದು ೂಂಡು ಬೇಗ ಅದನ್ನು ಮುಗಿಸಿದಳು. ದೇವಸ್ಥಾನಕ್ಕೆ ಹೋಗಿ ಕೈಮುಗಿದು ಂದು. ಮಡಿಬಟ್ಟೆಯಲ್ಲಿಯೇ ಮನೆದೇವರ ಮುಂದೆ ದೀಪ ಹಚ್ಚಿದಳು. ಮೇಲೆ ತುಳಸಿಗೆ ನೀರೆರೆದಳು.

ಚಟ್ನಿಗೆ ರುಬ್ಬಲು ಕುಳಿತಾಗ ಹೊರಗಿನಿಂದ ಕೂಗು ಕೇಳಿಬಂತು.

“ಸಾವತ್ರಕ್ಕಾ!”

“ಬಂದೇ.. ಬಂದೇ.”

ಸಾವತ್ರಕ್ಕ ಹೊರಗೆ ಬಂದು ನೋಡಿದಳು. ಸಣ್ಣ ಹುಡುಗಿಯೊಬ್ಬ
ನಿಂತಿದ್ದಾಳೆ.

"ಅರೆ! ಇವತ್ತು ನೀನು ಬಂದೆಯಾ?"

"ಹೌದು ಸಾವತ್ರಕ್ಕಾ."

"ಅದೇನು ಇವತ್ತು ಬೇಗ ಎದ್ದ ಹಾಗಿದೆ" ಅವಳ ಕೈಯಿಂದ ಪಾ
ತೆಗೆದುಕೊಳ್ಳುತ್ತಾ ಸಾವತ್ರಕ್ಕ ಪ್ರಶ್ನೆ ಹಾಕಿದಳು.

"ಇವತ್ತು ನಮಗೆ ಪರೀಕ್ಷೆ ಇದೆ ಸಾವತ್ರಕ್ಕ"

"ಇನ್ನೂ ನಿನ್ನ ಪರೀಕ್ಷೆ ಮುಗಿದಿಲ್ವಾ? ಆಗಲೇ ಎಲ್ಲರ ಪರೀಕ್ಷೆ ಮುಗಿದ
ಹೋಗಿದೆಯಲ್ಲ"

"ಇವತ್ತು ಕೊನೆ ಪರೀಕ್ಷೆ ಸಾವತ್ರಕ್ಕ. ಒಂದು ಪೇಪರ್ ಮುಂದೆ ಹೋಗಿತ್ತು
ಅದು ಇವತ್ತಿದೆ"

"ಹಾಗಿದ್ದರೆ ಇಲ್ಯಾಕೆ ಬಂದೆ? ಓದು ಎಲ್ಲಾ ಮುಗೀತಾ?" ಸಾವತ್ರ
ಹಾಲು ತುಂಬಿದ ಪಾತ್ರೆಯನ್ನು ಅವಳಿಗೆ ನೀಡಿದಳು.

"ಹುಂ. ಮುಗಿದಿದೆ. ನಾನು ಹೋಗ್ತೀನಿ"

"ಹೋಗಿ ಬಾ. ಪರೀಕ್ಷೆಯಲ್ಲಿ ಚೆನ್ನಾಗಿ ಬರಿಬೇಕು ಆಯ್ತಾ?"

"ಹುಂ."

ಸಾವತ್ರಕ್ಕ ಅಡುಗೆ ಮನೆ ಪ್ರವೇಶಿಸಿ ಚಟ್ನಿ ರುಬ್ಬಿ ಮುಗಿಸಿದಳು. ಒಲೆಯ
ಮೇಲೆ ಕಾವಲಿ ಇಟ್ಟಳು. ದೋಸೆ ಹೊಯ್ಯುವಷ್ಟರಲ್ಲಿ ಮತ್ತೆ ಹೊರಗಿನಿಂದ
ಕರೆ ಬಂತು.

"ಸಾವತ್ರಕ್ಕಾ!"

"ಓ"

"ಏನು ದೋಸೆ ಮಾಡುತ್ತಿರುವ ಹಾಗಿದೆ?"

“ಹೌದು. ಯಾರು ಭಟ್ಟರೇನು?” ಸಾವತ್ರಕ್ಕ ಎದ್ದು ಬಂದಳು.

“ಹೌದು.”

“ಪ್ರಶ್ನೆ ಕೇಳಿಯೇ ಬಂದವರು ಭಟ್ಟರೆನ್ನುವುದು ಗೊತ್ತಾಯಿತು”

“ಅದು ಹೇಗೆ?”

“ದೋಸೆ, ತಿಂಡಿ ಇತ್ಯಾದಿ ವಿಚಾರಿಸುವವರು ಬೇರೆ ಯಾರಿದ್ದಾರೆ? ಭಟ್ಟರಿಗೆ ಮತ್ತು ಹೊಟ್ಟೆಗೆ ಇರುವ ಸಂಬಂಧ ದೊಡ್ಡದಲ್ಲವೇ?”

“ನೋಡು ನೋಡು.. ಬೆಳಿಗ್ಗೆಯೇ ನನ್ನ ಕಾಲು ಎಳೆಯುವ ಕೆಲಸ ಮಾಡ್ತಾ ಇದ್ದೀಯಾ”

ಸಾವತ್ರಕ್ಕ ನಕ್ಕು ಹೇಳಿದಳು. “ಭಟ್ಟರೇ ಒಳಗೆ ಬನ್ನಿ, ಎರಡು ದೋಸೆ ತಿನ್ನುವಿರಂತೆ”

“ಬೇಡ, ಬೇಡ ಸಾವತ್ರಕ್ಕ”

“ಯಾಕೆ? ನಾನು ಹಾಸ್ಯ ಮಾಡಿದೆನೆಂದೇ?”

“ಹಾಗಲ್ಲ, ಸಾವತ್ರಕ್ಕಾ. ನನ್ನ ಪಾಲಿನ ಪೂಜೆ ಮುಗಿಯದೆ ನಾನು ನೀರು ಕೂಡಾ ಸೇವಿಸಲಾರೆ.”

“ಸರಿ.”

“ನನಗೆ ಸ್ವಲ್ಪ ಹೂ ಬೇಕಿತ್ತು. ತೆಗೆಯಬಹುದೇ?”

“ಅದಕ್ಕೇನು, ತೆಗೆಯಿರಿ ಭಟ್ರೆ”

ಅವಳು ಮರಳಿ ಬಂದು ದೋಸೆ ತೆಗೆಯತೊಡಗಿದಳು. ಸ್ವಲ್ಪ ಹೊತ್ತಿನಲ್ಲಿ ಅವಳ ಹಾಲಿನ ಗಿರಾಕಿ ಬಂತು.

“ಸಾವತ್ರಕ್ಕಾ ಹಾಲು”

“ಒಳಗೆ ಬಾ”

“ಏನು ಮಾಡ್ತಾ ಇದ್ದಿ? ದೋಸೆ ತೆಗೀತಿದ್ದಿಯಾ?”

"ಹೌದು. ಹೊಟ್ಟೆಗೆ ಏನಾದರೂ ಒಂದು ಬೇಕಲ್ಲ"

"ಇಷ್ಟು ಬೇಗ ಯಾಕೆ ತೆಗೀತೀಯಾ ಸಾವತ್ರಕ್ಕ"

"ಸುಮ್ಮನೆ ಕುಳಿತಿರುವ ಬದಲು ಒಂದೊಂದೇ ಕೆಲಸ ಮುಗಿಸಿಬಿಡೋಣಾ ಅಂತ... ನಿನ್ನ ಹಾಲಿನ ಪಾತ್ರೆ ಇಲ್ಲಿ ತಾ.."

"ಸಾವಿತ್ರಕ್ಕ ಇವತ್ತು ನಮಗೆ ಹಾಲು ಹೆಚ್ಚು ಬೇಕು"

"ಎಷ್ಟು ಬೇಕು?"

"ಅರ್ಧ ಲೀಟರ್ ಹೆಚ್ಚು"

"ಅರ್ಧ ಲೀಟರ್ ಇರಲಿಕ್ಕಿಲ್ಲ. ಕಾಲು ಲೀಟರ್ ಕೊಡುತ್ತೇನೆ. ಇವತ್ತು ನಮಗೂ ಹೆಚ್ಚು ಹಾಲು ಬೇಕು"

"ಇವತ್ತೇನು ವಿಶೇಷ?"

"ಇವತ್ತು ನನ್ನ ಮೈದುನ ಮತ್ತು ವಾರಗಿತ್ತಿ ಎಲ್ಲಾ ಬರ್ತಾರೆ"

"ಹೌದೇನು? ಅವರು ಬಾರದೆ ಬಹಳ ಕಾಲವಾಗಿರಬೇಕು, ಅಲ್ಲ?"

"ಎರಡು ವರ್ಷವಾಯಿತು. ಕಳೆದ ಸಲವೇ ಬರಬಹುದು ಎಂದುಕೊಂಡಿದ್ದೆ. ಆದರೆ ಬರಲಿಲ್ಲ. ಈ ಬಾರಿಯಂತೂ ಬರಲೇಬೇಕು ಅಂತ ನಾನೇ ಬರೆದಿದ್ದೆ"

"ಹುಂ"

"ತಿಂಗಳು ತಿಂಗಳು ಬರಲಿಕ್ಕೆ ಆಗುವುದಿಲ್ಲ, ಸರಿ. ಹಾಗೆಂದು ವರ್ಷಕ್ಕೊಮ್ಮೆ ಬರಬಹುದಲ್ಲ? ಅದೂ ಇಲ್ಲವೆಂದರೆ ಅಂತಹ ಕಷ್ಟ ಅದೇನು?"

"ಈಗ ಶ್ರೀನಿವಾಸ ಇರುವುದೆಲ್ಲಿ?"

"ಶೋಲಾಪುರದಲ್ಲಿ. ಅಲ್ಲಿಂದಲೂ ಬೇರೆ ಯಾವುದೋ ಊರಿಗೆ ಹೋಗುವುದಿದೆ ಅಂತ ಹೇಳ್ತಾ ಇದ್ದ. ಆಮೇಲೆ ಏನಾಯಿತೋ ಗೊತ್ತಿಲ್ಲ. ಜನ್ಮವಿಡೀ ಹೀಗೆ ತಿರುಗಾಡುತ್ತಾ ಕಳೆಯುತ್ತದೆ ಎಂದು ಕಾಣುತ್ತೆ.."

“ಇವತ್ತು ಬರ್ತಾರಲ್ವಾ ಅವರು?”

“ಹೌದು. ಈ ಬಾರಿ ಬರುವುದು ಸಾಧ್ಯವಿಲ್ಲ ಎಂದು ಅವನು ಬರೆದ. ಅದಕ್ಕೆ ನಾನು ‘ನಿನಗೆ ಬರಲಿಕ್ಕೆ ಆಗದಿದ್ದರೆ ಬೇಡ, ಹೆಂಡತಿ ಮಕ್ಕಳನ್ನಾದರೂ ಕಳುಹಿಸು’ ಅಂತ ಬರೆದುಬಿಟ್ಟೆ. ಈಗ ಅವನೂ ಬರ್ತಾನಂತೆ. ಅವರನ್ನು ಇಲ್ಲಿ ಬಿಟ್ಟು ಹೋಗ್ತಾನಂತ ಕಾಣುತ್ತೆ. ಆಮೇಲೆ ಅವರನ್ನು ಕರೆದುಕೊಂಡು ಹೋಗಲು ಮತ್ತೆ ಬರಬಹುದು.”

“ಅವನಿಗೆ ಎಷ್ಟು ಮಕ್ಕಳು, ಇಬ್ಬರೇ?”

“ಮೂರು ಜನ. ನೀನು ಅವರನ್ನು ಕಂಡಿಲ್ಲವೇನು?”

“ದೊಡ್ಡ ಮಗ ಕಳೆದ ಬಾರಿ ಇಲ್ಲಿಗೆ ಬಂದಿದ್ದನಲ್ಲಾ. ಆಗ ನೋಡಿದ ಹಾಗಿದೆ”

“ಆಮೇಲೆ ಬಾ. ನೀನೇ ನೋಡುವಂತೆ. ಮಕ್ಕಳು ರತ್ನದ ಹಾಗಿವೆ.”

“ಮತ್ತೆ ಬರ್ತೇನೆ”

“ನಿನಗೆ ಹಾಲು ಹೆಚ್ಚಿಗೆ ಬೇಕಿದ್ದರೆ ಸಂಜೆ ಹಾಲು ಕರೆದಾಗ ಕೊಡುತ್ತೇನೆ. ಆಯ್ತಾ..? ನಿನಗೆ ಎಷ್ಟು ಬೇಕಿತ್ತು?”

“ಒಂದು ಲೀಟರ್ ಸಾವತ್ರಕ್ಕ”

“ಮುಕ್ಕಾಲು ಲೀಟರ್ ಈಗ ತೆಗೆದುಕೊಂಡು ಹೋಗು. ಬಾಕಿ ಇರುವುದು ಸಂಜೆ ಕೊಡ್ತೇನೆ. ನಿನ್ನಮ್ಮ ಮಜ್ಜಿಗೆ ಬೇಕೆಂದು ಹೇಳಿದ್ರು ನಿನ್ನೆ. ಬೇಕಾ?”

“ಗೊತ್ತಿಲ್ಲ ಸಾಯತ್ರಕ್ಕ. ನನ್ನ ಹತ್ತಿರ ಏನೂ ಹೇಳಿಲ್ಲವಲ್ಲ”

“ಇರಲಿ ಬಿಡು. ಈಗ ಇದನ್ನು ಕೊಂಡುಹೋಗು. ಹೆಚ್ಚಿಗೆ ಇಲ್ಲಂತ ಹೇಳ್ತೀ ತಾನೇ?”

ಗಿರಾಕಿ ಹೋದ ನಂತರ ಸಾಯತ್ರಕ್ಕ ಮತ್ತೆ ಅಡುಗೆ ಮನೆಗೆ ಹೋದಳು. ಬೆಳಿಗ್ಗಿನ ಉಪಹಾರಕ್ಕೆ ನಾಲ್ಕೈದು ಜನರಿಗೆ ಸಾಲುವಷ್ಟು ದೋಸೆ ತೆಗೆದಿಟ್ಟಳು. ನಂತರ ಬಟ್ಟೆ ಒಗೆಯಲು ಹೋದಳು. ಮೈದುನ ಮತ್ತು ಅವನ ಕುಟುಂಬ

ಬೆಳಿಗ್ಗೆ ಏಳು, ಎಂಟು ಗಂಟೆಯೊಳಗೆ ಬಂದು ತಲಪಬಹುದೆಂಬ ನಿರೀ
ಅವಳದ್ದಾಗಿತ್ತು. ಈಗ ಗಂಟೆ ಎಂಟೂವರೆಯಾದರೂ ಅವರ ಸುಳಿವು ಇಲ್ಲ
ಹಾಗೆಂದುಕೊಂಡೇ ಅವಳು ಹಾಲನ್ನು ಒಲೆಯ ಮೇಲಿಟ್ಟು ಕುದಿಸಿದಳ
ಬೆಳಿಗ್ಗಿನ ತಿಂಡಿ ಸೇವಿಸಿದಳು.

ಆಮೇಲೆ ಮುಂದಿನ ಕೋಣೆಗೆ ಬಂದು ಅಕ್ಕಿ ಆರಿಸತೊಡಗಿದಳು
ಹೊರಗೆ ಸದ್ದು ಕೇಳಿಸಿದರೆ, ನೆರಳು ಕಾಣಿಸಿದರೆ ತಕ್ಷಣ ಎದ್ದು ಬಂದ
ನೋಡುವಳು. ಅಕ್ಕಿ ಆರಿಸಿದ ಬಳಿಕ ಮಧ್ಯಾಹ್ನದ ಪಲ್ಯಕ್ಕಾಗಿ ತರಕಾ
ಕತ್ತರಿಸಲು ಕುಳಿತಳು.

"ಅಮ್ಮಾ.." ಹೊರಗೆ ಗೇಟಿನ ಬಳಿಯಿಂದ ಕೂಗು ಕೇಳಿಸಿತು. ಬಂದು
ನೋಡಿದರೆ ರಸ್ತೆ ಗುಡಿಸುವ ಹೆಂಗಸು ಪೊರಕೆ ಕೈಯಲ್ಲಿ ಹಿಡಿದು ನಿಂತಿದ್ದಾಳೆ
ಸಾವತ್ರಕ್ಕನ ಮುಖ ನೋಡಿದ ಕೂಡಲೇ ಅವಳು ಕುಡಿಯಲು ನೀರು
ಬೇಡಿದಳು. ನೀರು ಕೊಡುವಾಗ ತಾನು ಬೆಳಿಗಿನಿಂದ ಏನೂ ತಿಂದಿಲ್ಲ
ತಿನ್ನಲು ಏನಾದರೂ ಇದೆಯಾ ಎಂದು ವಿಚಾರಿಸಿದಳು. ಸಾವತ್ರಕ್ಕ ಒಳಗೆ
ಹೋಗಿ ದೋಸೆ ತಂದು ಅವಳಿಗೆ ಕೊಟ್ಟಳು, "ತಗೋ ಬೆಳಿಗ್ಗೆ ತೆಗೆದದ್ದು
ತಣ್ಣಗಾಗಿದ್ದರೆ ಪರವಾಗಿಲ್ಲ ತಾನೆ?"

"ಇಲ್ಲಮ್ಮ. ಇದು ಸಿಕ್ಕಿದ್ದೇ ದೊಡ್ಡದು. ತುಂಬಾ ಉಪಕಾರವಾಯ್ತು
ನಿಮ್ಮದು"

ಸಮಯ ಕಳೆಯುತ್ತಾ ಹೋಯಿತು. ಒಂಭತ್ತೂವರೆ ಹತ್ತಾಯಿತು.
ಆದರೆ ನೆಂಟರು ಮಾತ್ರ ಬರಲೇ ಇಲ್ಲ. ಸಾವತ್ರಕ್ಕನಿಗೆ ಬೇಸರ ಬಂದು,
ನಿಂತಲ್ಲಿ ನಿಲ್ಲಲಾರದ ಚಡಪಡಿಕೆ ಶುರುವಾಯಿತು. ಅವಳು ಹಟ್ಟಿಗೆ ಹೋಗಿ
ಹಸುಗಳನ್ನು ಬಿಟ್ಟುಬಂದಳು. ಅವು ಸರಸರ ರಸ್ತೆಗಿಳಿದು ಕಣ್ಣಿಗೆ
ಕಾಣದಂತಾದವು. ಇನ್ನು ಸಂಜೆ ಹೊತ್ತು ಹಾಲು ಕರೆಯುವ ಸಮಯಕ್ಕೆ
ಸರಿಯಾಗಿ ತಮ್ಮಷ್ಟಕ್ಕೆ ಬಂದು ಬಿಡುತ್ತವೆ.

ಇನ್ನು ಏನು ಮಾಡುವುದೆಂದು ಸಾವತ್ರಕ್ಕ ಯೋಚಿಸುವಷ್ಟರಲ್ಲಿ
ನೆರೆಮನೆಯಾಕೆ ಬಂದು ತಲುಪಿದಳು.

"ಏನು ಸಾಯತ್ರಕ್ಕ, ಮೈದುನ ಮತ್ತು ಅತ್ತಿಗೆ ಇನ್ನೂ ಬಂದು ತಲುಪಿಲ್ಲವೇ?"

"ಇಲ್ಲ. ಗಡಿಬಿಡಿಯಲ್ಲಿ ಏನು ಮಾಡುವುದೆಂದು ಯೋಚಿಸ್ತಾ ಇದ್ದೆ ನೋಡು. ಅಷ್ಟರಲ್ಲಿ ನೀನು ಬಂದೆ. ಒಳ್ಳೇಯದಾಯ್ತು. ನಿನ್ನ ಗಂಡ ಆಫೀಸಿಗೆ ಹೋಗಿ ಆಯ್ತಾ?"

"ಹೌದು. ಸವಾರಿ ಹೋಗಿ ಆಯ್ತು"

"ಅದೇನು ಹೋಗಿ ಆಯ್ತು?" ಅವಳ ಧ್ವನಿಯಲ್ಲಿದ್ದ ನೀರಸಭಾವ ಸಾವತ್ರಕ್ಕನಿಗೆ ಆಚ್ಚರಿಯನ್ನುಂಟು ಮಾಡಿತು.

"ಸಾಕಾಗಿ ಹೋಗಿದೆ ಸಾವತ್ರಕ್ಕ. ಸಾಕೋಸಾಕು. ಒಬ್ಬ ಗಂಡ, ಒಬ್ಬ ಅತ್ತೆ. ದರಿದ್ರದವರು. ನನಗಂತೂ ಜೀವನ ಸಾಕಾಗಿ ಹೋಗಿದೆ"

"ಹಾಗೆ ಹೇಳಬಾರದು ಮಗಾ, ಗಂಡ ಗಂಡನೇ. ಅವನ ಮಾತು ಕೆಟ್ಟದಿರಬಹುದು. ಆದರೆ ಗಂಡನಿಗೆ ಕೊಡುವ ಮರ್ಯಾದೆಯನ್ನು ನಾವು ಕೊಡಲೇಬೇಕು"

"ನೀನು ಹಾಗೆ ಹೇಳಬಹುದು ಸಾವತ್ರಕ್ಕ, ಆದರೆ ನಾನು ಅನುಭವಿಸುತ್ತಿರುವ ಕಷ್ಟ ನಿನಗೆ ಹೇಗೆ ತಿಳಿಯಬೇಕು ಹೇಳು? ಈ ಅತ್ತೆ ಮತ್ತು ಈ ಗಂಡ ನನಗೆ ಮಾಡುವ ದ್ರೋಹ ಗೊತ್ತಿರುವುದು ಆ ದೇವ ಒಬ್ಬನಿಗೆ ಮಾತ್ರ!"

"ಇರಲಿ ಮಗಾ, ಇರಲಿ. ದುಃಖಕ್ಕೂ ಒಂದು ಕಾಲವಿದೆ. ಇವತ್ತು ನನಗೆ ನಾಳೆ ನಿನಗೆ. ಕರ್ಮದ ಫಲ ಯಾರನ್ನೂ ಬಿಡುವುದಿಲ್ಲ. ಬಿಡುವುದೇನು? ಇವತ್ತು ನಿನಗೆ ಕಷ್ಟ ಕೊಟ್ಟವರು ನಾಳೆ ಅದರ ಫಲವನ್ನು ಅನುಭವಿಸಲೇ ಬೇಕಾಗುತ್ತದೆ."

"ಅಲ್ಲ ಸಾವತ್ರಕ್ಕಾ ನಾನು ಏನು ಮಾಡಿದೆ ಅಂತ ಅವರು ಹೀಗೆ ನನ್ನನ್ನು ಹಿಂಸಿಸುತ್ತಿದ್ದಾರೆ? ಏನೂ ಇಲ್ಲದಿದ್ದರೂ.."

“ಬಿಡಮ್ಮ ಹುಡುಗಿ ಅದನ್ನು ಬಿಟ್ಟುಬಿಡು. ನೀನು ಇದನ್ನೆಲ್ಲಾ ನ
ಬಳಿ ಹೇಳಿದೆಯಾದರೆ ಅವರಿಗೆ ಮತ್ತಷ್ಟು ಕೋಪ ಬಂದೀತು. ಇನ
ನೀನು ಹೇಳುವುದು ಕೂಡಾ ಸರಿಯಲ್ಲ. ನಿನ್ನ ಮನೆಯ ಪ್ರಶ್ನೆಯನ
ನೀನು ತಾನೇ ಪರಿಹರಿಸಿಕೊಳ್ಳಬೇಕು? ಹೌದಲ್ಲ? ಗಂಡನೋ ಅತ್ತೆಯೋ
ಏನೇ ಮಾಡಲಿ ನಾವು ಅವರನ್ನು ಸ್ನೇಹದಿಂದ ಸರಿಮಾಡಬೇಕ
ಸಮಾಧಾನದಿಂದ ಇದ್ದರೆ ಎಲ್ಲರಿಗೂ ಒಳ್ಳೆಯದು. ಅವರು ಸಿಟ್ಟಿಗೆದ್ದರು
ನೀನು ಸುಮ್ಮನೆ ಇದ್ದರೆ ನಿನಗೇ ಒಳ್ಳೆಯದು. ಹೌದು ತಾನೇ?”

“ನನಗೆ ಗೊತ್ತಿಲ್ಲ ಸಾವತ್ರಕ್ಕ. ನಾನು ಯಾವಾಗಲಾದರೂ ಒಮ್ಮೆ ಹೊಳೆ
ಹಾರಿ ಜೀವ ಬಿಡುವುದಂತೂ ಖಂಡಿತ”

“ಛಿ! ಹಾಗೆ ಹೇಳಬೇಡ್ವೇ..”

ಅಷ್ಟರಲ್ಲಿ ಮನೆಯ ಮುಂದೆ ಟ್ಯಾಕ್ಸಿ ಬಂದು ನಿಂತಿತು.

“ಶ್ರೀನಿವಾಸ ಬಂದ ಎಂದು ಕಾಣುತ್ತೆ” ಸಾವತ್ರಕ್ಕ ಎದ್ದು ಬಂದಳು
ಅವಳಿಗಿಂತ ಮೊದಲು ನೆರೆಮನೆಯಾಕೆ ಹೊರಬಿದ್ದಳು. ಸಾವತ್ರಕ್ಕನ ಮೈದುನ
ವಾರಗಿತ್ತಿ ಮತ್ತು ಅವರ ಮಕ್ಕಳು ಟ್ಯಾಕ್ಸಿಯಿಂದ ಇಳಿದರು. ಮೈದುನ ಸಾಮಾನ
ಇಳಿಸುವಾಗ ಸಾವತ್ರಕ್ಕ ಮಕ್ಕಳನ್ನು ಕರೆದುಕೊಂಡು ಮನೆಗೆ ಬಂದಳು
ಅವಳನ್ನು ಹಿಂಬಾಲಿಸಿ ಮೈದುನ ಮತ್ತು ಅವನ ಹೆಂಡತಿ ಲಗ್ಗೇಜು ಹಿಡಿದ
ಬಂದರು.

“ಯಾಕೋ ಬರಲಿಕ್ಕೆ ಇಷ್ಟು ತಡ?” ಸಾವತ್ರಕ್ಕ ವಿಚಾರಿಸಿದಳು.

“ಟ್ರೇನ್ ಸ್ವಲ್ಪ ಲೇಟಾಯ್ತು ಅತ್ತಿಗೆ”

“ನಾನು ಬೆಳಿಗ್ಗಿನಿಂದ ನಿಮ್ಮ ದಾರಿಯೇ ಕಾಯುತ್ತಿದ್ದೆ. ಬರ್ತಾರೋ
ಇಲ್ಲವೋ ಅಂತ”

“ಬಂದೆವಲ್ಲ!” ಶ್ರೀನಿವಾಸ ನಕ್ಕ.

“ಹೌದು ಈಗ ನಂಬಿಕೆಯಾಯ್ತು ನೋಡು”

"ನೀನು ಏನು ಅಂದುಕೊಂಡೆ? ನಾವು ರೈಲನ್ನು ಮತ್ತೆ ತಿರುಗಿಸಿ ಶೋಲಾಪುರಕ್ಕೆ ಹೋಗಿಬಿಟ್ಟೆವು ಅಂತನಾ?"

"ಅದನ್ನೂ ಮಾಡುವ ಮನುಷ್ಯನೇ ನೀನು. ನಿನಗೆ ಈಗ ಅತ್ತಿಗೆ ಬೇಡ. ಈ ಮನೆ ಬೇಡ. ಈ ಊರು ಬೇಡ ಅಲ್ಲವೇ?"

"ಹಾಗಲ್ಲ ಅತ್ತಿಗೆ, ಸಮಯ ಸಿಗಬೇಕಲ್ಲ. ಈಗ ಮೊದಲಿನ ಹಾಗೆ ಅಲ್ಲವಲ್ಲ. ಆಫೀಸಿನ ಎಲ್ಲಾ ಜವಾಬ್ದಾರಿ ನನ್ನ ತಲೆಯ ಮೇಲೆ ಇದೆ."

"ಏನದು ತಲೆ ಮೇಲೆ ಜವಾಬ್ದಾರಿ, ಹೋಗೋ..." ಸಾವತ್ರಕ್ಕ ಈಗ ಮಕ್ಕಳ ಕಡೆಗೆ ತಿರುಗಿದಳು, "ನನ್ನ ನೆನಪುಂಟಾ ಮಕ್ಕಳೇ?" ಅವರು ನಕ್ಕರು.

"ಅವರು ನಿನ್ನನ್ನು ಮರೆತಿರಬಹುದೆಂದು ತಿಳಿದೆಯೇನು?" ಶ್ರೀನಿವಾಸ ಹೇಳಿದ. "ಹಾಗೇನಿಲ್ಲ. ಬರುವ ದಾರಿಯುದ್ದಕ್ಕೂ ನಿನ್ನ ಮತ್ತು ನಿನ್ನ ಆ ಗಂಡು ಕರು ಇದೆಯಲ್ಲಾ ಅದರ ಕುರಿತೇ ಮಾತನಾಡುತ್ತಿದ್ದರು."

"ನಿನಗೆ ನಾನು ಬೇಡವಾಗಿರಬಹುದು ಆದರೆ ಅವರಿಗೆ ಹಾಗಲ್ಲವಲ್ಲ. ಅಷ್ಟು ಸಾಕು ನನಗೆ"

"ಈಗ ಹೇಗೆ ಉಬ್ಬಸ ಬರುತ್ತಾ ನಿಮಗೆ?" ವಾರಗಿತ್ತಿ ಪ್ರಶ್ನೆ ಮಾಡಿದಳು.

"ದೇವರದಯೆಯಿಂದ ಕಳೆದ ಎರಡು ವರ್ಷಗಳಿಂದ ಏನೂ ಇಲ್ಲಮ್ಮ. ಹೀಗೇ ನಡೆದರೆ ಸಾಕಿತ್ತು. ಈಗ ಪ್ರಾಯ ಐವತ್ತೆರಡು. ಉಬ್ಬಸ ಬಿಟ್ಟರೆ ಬೇರೆ ಯಾವ ರೋಗವೂ ಇಲ್ಲ. ಮುಂದಿನ ದಿನಗಳಲ್ಲಿ ಕೂಡಾ ಏನೂ ಇಲ್ಲದೆ ಚಾಪೆ ಹಿಡಿಯದೆ ಕಳೆಯಬೇಕೆನ್ನುವುದೇ ನನ್ನ ಆಸೆ. ಅಲ್ಲಿ ಮನೆಗೆಲಸಕ್ಕೆ ಜನ ಇದ್ದಾರಾ?"

"ಇದ್ದಾರೆ ಅತ್ತಿಗೆ. ಇಲ್ಲದಿದ್ದರೆ ನನ್ನೊಬ್ಬಳಿಂದ ಸಾಧ್ಯವೇ? ಇವರನ್ನು ಮತ್ತು ಮಕ್ಕಳನ್ನು ಸಮಯಕ್ಕೆ ಸರಿಯಾಗಿ ಆಫೀಸು–ಶಾಲೆಗೆ ಹೊರಡಿಸುವುದೆಂದರೆ ಅದೇನು ಸಣ್ಣ ಕೆಲಸವೇ?"

"ಅದು ಹೌದು"

"ಅತ್ತಿಗೆ! ನಮ್ಮನ್ನು ಉಪವಾಸ ಕೆಡಹುವ ಆಲೋಚನೆ ಏನು? ನನಗೆ ಹೊಟ್ಟೆ ತುಂಬಾ ಹಸೀತಿದೆ" ಶ್ರೀನಿವಾಸ ಹೇಳಿದ.

"ಹಾಗಿದ್ದರೆ ಬೆನ್ನಿಗೆ ಬಾಯಿ ಹಾಕು." ಮಕ್ಕಳು ನಕ್ಕರು.

"ಯಾರ ಬೆನ್ನಿಗೆ ಬಾಯಿ ಹಾಕಲಿ?"

"ನಿನ್ನ ಹೆಂಡತಿಯದು"

"ಹಾಕಲೇನೇ?"

"ಬೇಡವೋ ಮಹಾರಾಯ. ಬೆಳಿಗ್ಗೆ ತೆಗೆದಿಟ್ಟ ದೋಸೆ ಇದೆ. ನಿನಗೆ ತುಂಬಾ ಹಸಿವಾಗಿದ್ದರೆ ಅದನ್ನು ತಿಂದುಬಿಡು. ಇಲ್ಲದಿದ್ದರೆ ಬಿಸಿ ತೆಗೆದುಕೊಡ್ತೀನಿ"

"ನನಗೆ ಬಿಸಿ ದೋಸೆಯೇ ಸಾಕು ಅತ್ತಿಗೆ!"

"ಅವರಿಗ್ಯಾಕೆ ತೊಂದರೆ ಕೊಡ್ತೀರಾ?" ಶ್ರೀನಿವಾಸನ ಹೆಂಡತಿ ಹೇಳಿದಳು.

"ನೀನು ಸುಮ್ಮನೆ ಕೂತ್ಕೊ. ಅವರು ನನ್ನ ಅತ್ತಿಗೆ, ಬೇರೆ ಯಾರೂ ಅಲ್ಲ."

"ತೊಂದರೆ ಎನು ಬಂತು? ಕಾವಲಿ ಬಿಸಿ ಮಾಡಿ ಅದಕ್ಕೆ ಹಿಟ್ಟು ಹಾಕಿದರೆ ದೋಸೆ ಆಗಿಬಿಡುತ್ತೆ. ಅದರಲ್ಲೇನು ತೊಂದರೆ. ನೀವು ಹೋಗಿ ಬಟ್ಟೆ ಬದಲಾಯಿಸಿ ಬನ್ನಿ. ಹಲ್ಲುಜ್ಜದೇ ಇದ್ದರೆ ಅದನ್ನೂ ಮುಗಿಸಿ ಬನ್ನಿ. ಅಷ್ಟರಲ್ಲಿ ದೋಸೆ ಆಗಿಬಿಡುತ್ತೆ, ಹೋಗಿ" ಸಾವತ್ರಕ್ಕ ಬಹಳ ಉತ್ಸಾಹದಿಂದ ಅಡುಗೆ ಮನೆಗೆ ಹೋಗಿ ದೋಸೆ ತೆಗೆಯಲು ಪ್ರಾರಂಭಿಸಿದಳು.

"ನಿನಗೆ ಸ್ನಾನಕ್ಕೆ ಬಿಸಿನೀರು ಬೇಕೇನು?" ಅವಳು ವಾರಗಿತ್ತಿಯನ್ನು ಕೇಳಿದಳು.

"ಬೇಡ ಅತ್ತಿಗೆ. ತಣ್ಣೀರಲ್ಲಿಯೇ ಸ್ನಾನ ಮಾಡ್ತೀನಿ. ಈ ಸೆಕೆಯಲ್ಲಿ ಅದೇ ಹಿತ."

"ಮಕ್ಕಳಿಗೆ?"

"ಹಾಗೇನಿಲ್ಲ. ಅವರಿಗೂ ತಣ್ಣೀರಿನಲ್ಲಿ ಸ್ನಾನ ಮಾಡಿ ಅಭ್ಯಾಸ ಇದೆ"

"ಬೇಕಾದರೆ ನೀರು ಬಿಸಿ ಮಾಡ್ತೀನಿ"

"ಬೇಡ.. ಬೇಡ"

ಮಕ್ಕಳು ಸಾವತ್ರಕ್ಕನ ಬಳಿ ಬಂದರು. "ದೊಡ್ಡಮ್ಮ, ನಾವು ಕಳೆದ ಬಾರಿ ಬಂದಾಗ ಒಂದು ಗಂಡು ಕರು ಇತ್ತಲ್ಲ. ಅದು ಎಲ್ಲಿದೆ? ಹೊರಗೆ ಹೋಗಿದೆಯೇನು?"

"ಅದನ್ನು ಮಾರಿದೆ ಕಣ್ರೊ"

"ಮಾರಿಬಿಟ್ರಾ! ಯಾಕೆ?"

"ಈಗ ಅದು ಬೆಳೆದು ಕೋಣವಾಗಿರಬಹುದು. ಅದನ್ನಿಟ್ಟು ನಮಗೆ ಏನು ಸಿಗುತ್ತೆ?"

"ಏನೂ ಸಿಗೊಲ್ವಾ?"

"ಹಸು ಸಾಕಿದರೆ ಹಾಲು ಕೊಡುತ್ತೆ. ಗಂಡು ಕರು ಬೆಳೆದರೆ ಗದ್ದೆಯಲ್ಲಿ ಉಳುವುದಕ್ಕೆ, ಅಥವಾ ಗಾಡಿ ಎಳೆಯುವುದಕ್ಕೆ ಸಹಾಯ ಮಾಡುತ್ತೆ. ನಮಗೆ ಗದ್ದೆಯೂ ಇಲ್ಲ ಗಾಡಿಯೂ ಇಲ್ಲ. ಮತ್ಯಾಕೆ ನಮಗೆ ಕೋಣ?" ಮಕ್ಕಳಿಗೆ ಕೆಟ್ಟದೆನಿಸಿತು. ಅದನ್ನು ನೋಡಿದ ಸಾವತ್ರಕ್ಕ ಹೇಳಿದಳು, "ಅರೆ, ಇಲ್ಲಿ ಬೇರೆ ಕರುಗಳು ಇವೆಯಲ್ಲ, ಹಟ್ಟಿಗೆ ಹೋಗಿ ನೀವು ನೋಡಿಲ್ವಾ? ಒಂದಲ್ಲ ಎರಡು ಕರುಗಳಿವೆ"

"ನಾವು ಹೋಗಿ ನೋಡಬಹುದೇ?"

"ಓ, ಆದರೆ ಈಗ ನೀವು ಇದನ್ನು ತಿನ್ನಬೇಕು. ಆಮೇಲೆ ಎಲ್ಲಿ ಬೇಕಾದರೂ ಹೋಗಬಹುದು"

ಸಾವತ್ರಕ್ಕ ತಟ್ಟೆ ಇಟ್ಟು ಅವರಿಗೆ ದೋಸೆ ನೀಡಿದಳು. ಸ್ವಲ್ಪ ಹೊತ್ತು ಬಿಟ್ಟು ಶ್ರೀನಿವಾಸನೂ, ಅವನ ಹೆಂಡತಿಯೂ ಅಲ್ಲಿಗೆ ಬಂದರು.

"ಮತ್ತೇನು ವಿಶೇಷ ಅತ್ತಿಗೆ?" ಶ್ರೀನಿವಾಸ ಕೇಳಿದ.

"ವಿಶೇಷ ಏನು ಬಂತು? ದಿನ ಕಳೆಯುತ್ತೆ"

"ನಿನಗೆ ನಮ್ಮೊಡನೆ ಅಲ್ಲಿಗೆ ಬಂದು ಇರಬಹುದಲ್ವಾ?"

“ಏನೂ ಬೇಡ. ಈ ಮುದಿಪ್ರಾಯದಲ್ಲಿ ಅಲ್ಲಿ ಇಲ್ಲಿ ಅಲೆದಾಡಿ ಸಾಯ್ಬೇ
ಅಂತ ಹೇಳ್ತೀದ್ದಿಯೇನು?”

“ಹಾಗೆ ಯಾಕೆ ಹೇಳ್ತೀರಾ, ಅತ್ತಿಗೆ?” ವಾರಗಿತ್ತಿ ವಿಚಾರಿಸಿದಳು.

“ಈಗ ನನಗೆ ತಿರುಗಾಡುವ ಪ್ರಾಯ ಅಲ್ಲ. ಕಂಡ ಕಡೆಯೆಲ
ಅಲೆದಾಡಿಕೊಂಡಿರುವುದು ನನಗೆ ಸೇರುವುದೂ ಇಲ್ಲ. ಸತ್ಯ ಏನೆಂದು ನನ
ಗೊತ್ತಿದೆಯಲ್ಲ. ಆಮೇಲೆ ಜ್ವರ ಬಂತು, ಉಬ್ಬಸ ಬಂತು, ನೋಡಲು ಸಾಧ್ಯವಿ
ಅದಾಗುವುದಿಲ್ಲ ಇದಾಗುವುದಿಲ್ಲ ಅಂತ ನಿಮಗೆ ಕಷ್ಟ ಕೊಡು, ನಿಮ್ಮ ಶಾ
ತಗೋ. ಇದೆಲ್ಲಾ ಯಾಕೆ ಹೇಳು? ನಾನು ಇಲ್ಲಿ ಸುಖವಾಗಿದ್ದೇನೆ. ಇಲ್ಲೆ
ಇರುತ್ತೇನೆ. ಮದುವೆಯಾದಂದಿನಿಂದ ಇಲ್ಲಿದ್ದೇನೆ. ನಾನು ಸಾಯುವುದ
ಕೂಡಾ ಇಲ್ಲೇ.”

“ಎಷ್ಟು ಸಮಯವೆಂದು ಹೀಗೆ ಒಬ್ಬಳೇ ಇರ್ತೀರಿ ಅತ್ತಿಗೆ?”

“ಒಬ್ಬಳೇ ಅಂತ ಯಾರು ಹೇಳಿದ್ದು? ನಿಮಗೆ ಕಾಣಬಹುದು ನಾನು
ಒಬ್ಬಳೇ ಇದ್ದೀನಿ ಅಂತ. ಇವತ್ತು ನೀವು ಇದ್ದೀರಿ ಅಂತ ಬೇರೆ ಯಾರೂ
ಬರಲಿಲ್ಲ. ಇಲ್ಲದಿದ್ದರೆ ಸುತ್ತುಮುತ್ತಲಿನ ಯಾರಾದರೂ ಬರ್ತಾ ಇರ್ತಾರೆ
ಗೊತ್ತಾಯ್ತಾ? ನೀವು ಬರುವಾಗಲೇ ಒಬ್ಬಳು ಹುಡುಗಿ ಇಲ್ಲಿ ಇದ್ದಳಲ್ಲ
ಹಾಗೆ ಯಾವಾಗಲೂ ಯಾರಾದರೂ....”

ಸಾವತ್ರಕ್ಕನಿಗೆ ಇನ್ನೂ ಒಂದು ವಿಚಾರ ಹೇಳಬೇಕೆನಿಸಿತು. ‘ಹೀಗೆ
ನಾನು ಒಂಟಿಯಾಗಿ ಯಾವಾಗಲೂ ಉಳಿಯುವುದಿಲ್ಲ. ನನ್ನ ಗಂಡ ಮತ್ತೆ
ಬರಬಹುದು. ನನ್ನ ಅಂಗಳದಲ್ಲಿ ಬಂದು ನಿಲ್ಲಬಹುದು. “ಸಾವಿತ್ರೀ” ಎಂದು
ಕೂಗಿ ಕರೆಯುಬಹುದು. ಅವರು ಸತ್ತುಹೋಗಿದ್ದಾರೆಂದು ಜನ
ಮಾತನಾಡಿಕೊಳ್ಳುತ್ತಾರೆ. ಅದು ಸುಳ್ಳೆಂದು ಅವರು ಸಿದ್ಧ ಮಾಡಲಿದ್ದಾರೆ.
ನಾವು ಮತ್ತೆ ಒಂದಾಗಲಿದ್ದೇವೆ. ಹೌದು ಜನರು ಸುಳ್ಳು ಹೇಳುತ್ತಿದ್ದಾರೆ.
ಅದೆಲ್ಲವೂ ಸುಳ್ಳೇ. ನನ್ನ ಗಂಡನನ್ನು ನೋಡಿದ್ದೇನೆ ಎಂದವರು ಎಷ್ಟು
ಮಂದಿ ಇದ್ದಾರೆ! ಹೌದು. ಇಪ್ಪತ್ತೈದು ವರ್ಷಗಳ ಹಿಂದೆ ಅವರು
ಸತ್ತುಹೋದರೆಂದು ದುಃಖ ಪ್ರಕಟಿಸುವ ತಂತಿ ಬಂದಿತ್ತು. ಅದು ಸುಳ್ಳು.

ಎಲ್ಲಿಯೋ ಯಾರದೋ ಮೃತದೇಹ ನೋಡಿ ಅದು ನನ್ನ ಗಂಡನದು ಎಂದು ತಪ್ಪಿ ತಿಳಿದುಕೊಂಡಿದ್ದಾರೆ. ನನಗೆ ಗೊತ್ತು. ಅವರು ಜೀವಂತ ಇದ್ದಾರೆ. ಎಲ್ಲಿಯಾದರೂ ಒಂದೆಡೆ ಇದ್ದಾರೆ. ಯಾವಾಗಲಾದರೂ ಮತ್ತೆ ಬರುವವರಿದ್ದಾರೆ.' ಆದರೆ ಸಾವತ್ರಕ್ಕ ಬಾಯಿಬಿಟ್ಟು ಇಷ್ಟು ಮಾತ್ರ ಹೇಳಿದಳು,

"ಯಾರೂ ಇಲ್ಲದಿದ್ದರೆ ಏನಾಯಿತು, ದೇವರೊಬ್ಬನಿದ್ದಾನಲ್ಲ. ಅವನು ನನ್ನನ್ನು ಬಿಟ್ಟು ಹಾಕಲಿಕ್ಕಿಲ್ಲ"

"ಆಗ ಬಂದಿದ್ದಳಲ್ಲ, ಯಾರವಳು?" ವಾರಗಿತ್ತಿ ವಿಚಾರಿಸಿದಳು.

"ಆ ಮನೆಯವಳು" ಸಾವತ್ರಕ್ಕ ಪಕ್ಕದ್ಮನೆಗೆ ಬೆರಳು ತೋರಿಸಿ ಹೇಳಿದಳು.

"ಓ ಆ ಜಯಕುಮಾರನ ಹೆಂಡತಿಯೇ?"

"ಹೌದು, ಕಳೆದ ವರ್ಷ ಅವನ ತಂದೆ ತೀರಿಕೊಂಡದ್ದು ನಿನಗೆ ಗೊತ್ತಿರಬೇಕಲ್ಲ"

"ಹೌದಾ? ಹೇಗೆ? ಅವರಿಗೆ ಹಾಗೇನೂ ಕಾಯಿಲೆ ಇರಲಿಲ್ಲವಲ್ಲ."

"ಏನೂ ಇರಲಿಲ್ಲ. ಬೆಳಿಗ್ಗೆ ಯಾಕೆ ಎದ್ದಿಲ್ಲವೆಂದು ನೋಡಿದರೆ ಜೀವ ಇರಲಿಲ್ಲವಂತೆ."

"ಹುಂ."

"ಆ ಹುಡುಗಿಯ ಮದುವೆ ನಡೆದು ಏಳೆಂಟು ತಿಂಗಳು ಕಳೆದಿತ್ತು ಅಷ್ಟೇ. ಈಗ ಎಲ್ಲರೂ ಸೇರಿ ಆ ಹುಡುಗಿಯನ್ನು ದೂಷಿಸುತ್ತಿದ್ದಾರೆ. ಅವಳು ಮನೆಯಲ್ಲಿ ಕಾಲಿಟ್ಟದ್ದೇ ಮಾವ ಸತ್ತು ಹೋದರು ಎಂದುಕೊಂಡು."

"ನಾನ್‌ಸೆನ್ಸ್"

"ಅವಳು ಇಲ್ಲಿಗೆ ಬಂದು ಅಳ್ತಾ ಕೂತಿರ್ತಾಳೆ. ಎಲ್ಲಿಯಾದರೂ ಹೊಳೆಗೆ ಹಾರಿ ಜೀವ ತೆಗೆದುಕೊಳ್ಳಬಹುದೇ ಅಂತ ನನಗೆ ಭಯ. ಆಗ ಬಂದಾಗಲೂ ಹೇಳ್ತಿದ್ದಳು–ಹೆಚ್ಚುಕಡಿಮೆಯಾದರೆ ಹೊಳೆಗೆ ಹಾರಿಯೇ ಸಿದ್ಧ ಅಂತ."

"ಅತ್ತಿಗೆ, ಆ ರಂಗನಾಥ ಮಾವನ ಮಗ ಇದ್ದಾನಲ್ಲ? ಅವನು ಶೋಲಾಪುರಕ್ಕೆ ಬಂದಿದ್ದ"

"ಹೌದಾ, ಯಾವಾಗ?"

"ನಾಲ್ಕೈದು ತಿಂಗಳಾದವು. ನಮ್ಮ ಮನೆಯಲ್ಲಿ ಒಂದು ದಿನ ಇದ್ದ"

"ಆಹಾ! ಅವನು ಯಾಕೆ ಶೋಲಾಪುರಕ್ಕೆ ಹೋದನಪ್ಪಾ?"

"ಯಾವುದೋ ಕೆಲಸವಿದೆ ಅಂತ ಹೇಳ್ತಿದ್ದ. ಏನೋ ಖರೀದಿ ಮಾಡಲಿಕ್ಕೆ ಇರಬಹುದು "

"ಅದೇನಿಲ್ಲ. ಅವನು ಇಲ್ಲಿಂದ ಮುಖ ತಪ್ಪಿಸಿ ತಿರುಗಾಡಿಕೊಂಡು ಇದ್ದಾನೆ. ಬಟ್ಟೆ ವ್ಯಾಪಾರ ಮಾಡ್ತೀನಿ ಅಂತ ಊರೆಲ್ಲಾ ಸಾಲ ಮಾಡಿ ಎಲ್ಲಾ ದಿವಾಳಿ ಆಯ್ತು. ಇಲ್ಲಿದ್ದರೆ ಬದುಕಿ ಉಳಿಯಲಾರೆ ಎಂದುಕೊಂಡು ಊರೂರು ಸುತ್ತುತ್ತಿದ್ದಾನೆ. ಮೊನ್ನೆ ಯಾರೋ ಜಲಗಾಂವ್‌ನಲ್ಲಿ ನೋಡಿದ್ದರಂತೆ.."

ಜಲಗಾಂವ್ ಎಂದ ಕೂಡಲೇ ಶ್ರೀನಿವಾಸನ ತಲೆಯಲ್ಲಿ ಮಿಂಚು ಹೊಡೆದಂತಾಯಿತು. "ಅತ್ತಿಗೆ, ಜಲಗಾಂವ್ ಹೆಸರು ಕೇಳಿದಾಗ ನೆನಪಿಗೆ ಬಂತು.." ಅವನು ಸಾವಿತ್ರಕ್ಕನ ಮುಖ ನೋಡಿದ. ಅವಳು ಕೇಳುತ್ತಿದ್ದಳು. ಅವನು ಮಕ್ಕಳಿಗೆ ಹೊರಗೆ ಹೋಗಿ ಆಟವಾಡಿಕೊಳ್ಳುವಂತೆ ತಿಳಿಸಿದ. ಆಮೇಲೆ ಧ್ವನಿ ತಗ್ಗಿಸಿ ಹೇಳಿದ, "ಒಂದೂವರೆ ತಿಂಗಳ ಹಿಂದೆ ನಾನು ಅಣ್ಣನನ್ನು ನೋಡಿದೆ"

ತಕ್ಷಣ ಸಾವತ್ರಕ್ಕನಿಗೆ ಗಲಿಬಿಲಿಯಾಯಿತು. ನಾನು ಇದೇನು ಕೇಳುತ್ತಿದ್ದೇನೆ? ಸತ್ಯವೇ ಸುಳ್ಳೇ? ನನ್ನ ಹೃದಯದಲ್ಲಿ ಬಚ್ಚಿಟ್ಟುಕೊಂಡಿದ್ದ ಮಾತು ಮೈದುನನ ತುಟಿಯ ಮೇಲೆ ಬಂತೇ? ಅವನು ಖಚಿತವಾಗಿಯೂ ನನ್ನ ಗಂಡನನ್ನು ನೋಡಿದ್ದೇನೆ ಎಂದು ಹೇಳಿದನೇ.

"ಏನೋ? ಏನು ಹೇಳಿದೆ ನೀನು? ಯಾರನ್ನು ನೋಡಿದೆ ಎಂದು ಹೇಳಿದೆ?"

"ಅಣ್ಣನನ್ನು–ನಿನ್ನ ಗಂಡನನ್ನು"

ತಾನು ಸಾವಿತ್ರಕ್ಕನ ಗಂಡನನ್ನು, ತನ್ನ ಅಣ್ಣನನ್ನು ಎಲ್ಲಿ ಯಾವಾಗ ನೋಡಿದೆ ಎನ್ನುವುದನ್ನು ಅವನು ವಿವರಿಸಿದ. ಸಾವತ್ರಕ್ಕ ಸ್ತಬ್ಧಳಾದಳು.

ಬೇಕಾದಷ್ಟು ಜನರು ತನ್ನ ಗಂಡನನ್ನು ಬೇರೆಬೇರೆ ಸಂದರ್ಭದಲ್ಲಿ ನೋಡಿದ ಸುದ್ದಿ ಅವಳಿಗೆ ಸಿಕ್ಕಿದೆ. ಆದರೆ ಯಾರೂ ಅವರನ್ನು ಪ್ರತ್ಯಕ್ಷವಾಗಿ ಭೇಟಿಯಾಗಿರಲಿಲ್ಲ. ಮೈದುನನ ಹಾಗೆ ಯಾರೂ ಅವರೊಡನೆ ಮಾತನಾಡಿರಲಿಲ್ಲ. ಅವರ ಮನೆಗೆ ಹೋಗಿ ಇದ್ದು ಬಂದಿರಲಿಲ್ಲ.

ಇಪ್ಪತ್ತೈದು ವರ್ಷಗಳ ನಂತರ ಇವತ್ತು ಈ ಸುದ್ದಿ ನಿಶ್ಚಿತ ರೂಪದಲ್ಲಿ ಬಂದು ತಲುಪಿದೆ. ನನ್ನ ಗಂಡ ಜೀವಂತ ಇದ್ದಾರೆ. ಅವರು ಸತ್ತು ಹೋಗಿಲ್ಲ. ಇಲ್ಲ ಅವರು ಸತ್ತು ಹೋಗಿಲ್ಲ. ಆ ದಿನ ಅವರು ಸತ್ತು ಹೋಗಿದ್ದಾರೆ ಎಂದು ಬಂದ ತಂತಿ, ಅದು ಕೂಡಾ ತಪ್ಪೇ. ಅವರು ನನ್ನ ಹಾಗೆ ಜೀವಂತವಾಗಿ ಓಡಾಡಿಕೊಂಡಿದ್ದಾರೆ– ಓ ದೇವರೇ!

ಸಾವತ್ರಕ್ಕನ ಇಡೀ ದೇಹ ಅರಳಿತು. ಅವಳ ಖುಷಿ ಉಕ್ಕಿ ಹರಿಯಿತು. "ಹಾಗೇನು ಆಗಿಲ್ಲವೆಂದು ನನಗೆ ತಿಳಿದೇ ಇತ್ತು. ಯಾರಾದರೂ ಒಂದು ದಿನ ಹೀಗೆ ಹೇಳಬಹುದೆಂದು ನನಗೆ ಗೊತ್ತಿತ್ತು. ಆ ದಿನ ಆ ತಂತಿ ಬಂದಾಗಲೇ ನನಗೆ ಗೊತ್ತಾಗಿತ್ತು ಅದರಲ್ಲಿ ಇರುವುದು ಸತ್ಯವಲ್ಲವೆಂದು. ನನ್ನ ಈ ಕುಂಕುಮವನ್ನು ನೋಡಿ ಎಷ್ಟೋ ಮಂದಿ ನನಗೆ ಮರುಳೆಂದು ತಿಳಿದುಕೊಂಡಿರಬಹುದು. ಆದರೆ ನನಗೆ ಗೊತ್ತಿತ್ತು ಕಣೋ ಅವರು ಎಲ್ಲಿಯಾದರೂ ಇದ್ದಾರೆ ಎನ್ನುವುದು. ನನ್ನ ಮನಸ್ಸು ನನಗೆ ಹೇಳುತ್ತಿತ್ತು. ನನಗೆ ಒಳ್ಳೇ ವಿಶ್ವಾಸವಿತ್ತು. ನಾನು ಈ ಕುಂಕುಮ ಯಾಕೆ ಇಟ್ಟುಕೊಳ್ಳುತ್ತಿದ್ದೆ ಎನ್ನುವುದು ಈಗಲಾದರೂ ಗೊತ್ತಾಯಿತಲ್ಲ? ದೇವರ ಆಟವೆಂದರೆ ಇದೇ. ಮೊದಲಿನಿಂದಲೂ ನನಗೆ ನಂಬಿಕೆ ಇತ್ತು ಕಣೋ. ದೇವರು ನನ್ನ ಪ್ರಾರ್ಥನೆ ಕೇಳಿದ. ಅರೆ, ದೇವಸ್ಥಾನದಲ್ಲಿ ಕಲ್ಯಾಣೋತ್ಸವ ಮಾಡಬೇಕಲ್ಲ. ಹಣ ನಾನು ಕೊಡ್ತೇನೆ. ಇವತ್ತೇ ಸಂಜೆ ದೇವಸ್ಥಾನಕ್ಕೆ ಹೋಗಿ ಕಟ್ಟಿ ಬಾ ಆಯ್ತಾ?"

ಮೈದುನ ಮಾತನಾಡಲಿಲ್ಲ.

"ಬೇಡ ಬಿಡು, ನಾನೇ ಹೋಗ್ತೇನೆ. ಪ್ರತಿದಿನ ಎರಡು ಬಾರಿ ದೇವಸ್ಥಾನಕ್ಕೆ ಹೋಗುವವಳು ನಾನು. ನಿನಗ್ಯಾಕೆ ಹೇಳಬೇಕು. ಅದಿರಲಿ, ನಿನ್ನ ಅಣ್ಣ ಈಗ ಹೇಗಿದ್ದಾರೆ?"

"ಕೂದಲು ಹಣ್ಣಾಗಿ, ಗಲ್ಲ ಒಳಗೆ ಹೋಗಿ, ಕಣ್ಣು ಗುಳಿ ಬಿದ್ದು ಬಹಳ ಮುದುಕರಾಗಿದ್ದಾರೆ"

"ಮತ್ತೆ, ಮುದುಕರಾಗದೇ ಇನ್ನೇನು? ಆಗಲೇ ಅವರಿಗೆ ಮೂವತ್ತೊಂದಾಗಿತ್ತು. ಈಗ ಐವತ್ತೇಳು, ಐವತ್ತೆಂಟು ಆಗಿರಬಹುದು. ಮುದುಕರಾಗಲೇ ಬೇಕಲ್ಲ. ಐವತ್ತು ತುಂಬುವುದರೊಳಗೆ ನಿನ್ನ ಕೂದಲೆಲ್ಲಾ ಬಿಳಿಯಾಗಿಬಿಟ್ಟಿದೆ ನೋಡು"

"ಅಹಾ! ಅಣ್ಣನ ಸುದ್ದಿ ಕೇಳಿದ ಕೂಡಲೇ ಅತ್ತಿಗೆಗೆ ನಾನು ಬೇಡವಾಗಿಬಿಟ್ಟೆ. ಇರಲಿ!"

ತಕ್ಷಣ ಸಾವತ್ರಕ್ಕನಲ್ಲಿ ಅಪನಂಬಿಕೆ ಹುಟ್ಟಿತು. "ಹೌದು ಕಣೋ, ಯುದ್ಧ ಕಳೆದು ಇಪ್ಪತ್ತೈದು ವರ್ಷಗಳಾದವು. ಒಂದು ಬಾರಿಯಾದರೂ ಇಲ್ಲಿ ಬರಬೇಕೆಂದು ಅವರಿಗೆ ಅನ್ನಿಸಲಿಲ್ಲ. ಈಗ ಯಾಕೆ ಆ ಬುದ್ಧಿ ಹುಟ್ಟಿತು?"

– ಅವಳ ಅಪನಂಬಿಕೆ ಕ್ರೋಧವಾಗಿ ಪರಿವರ್ತನೆಯಾಯಿತು. "ಅವರಿಗೆ ಮರಳಿ ಬರಲು ಏನಾಗಿತ್ತಂತೆ? ಇಲ್ಲಿ ನಾನೊಬ್ಬಳೇ ಹಗಲಿರುಳು ಕಣ್ಣಿಗೆ ಎಣ್ಣೆ ಹಾಕಿ ಕಾಯುತ್ತಿರುವುದು ಅವರಿಗೆ ತಿಳಿದಿರಲಿಲ್ಲವೇನು?"

ಮೈದುನನಿಗೆ ಸಂಕಟವಾಯಿತು. ಅವನ ಮನಸ್ಸಿನಲ್ಲಿ ದುಃಖದ ಅಲೆ ಚಲಿಸಿತು. ಅವನು ಉಗುಳು ನುಂಗಿದ. ಅವನು ಮೌನವಾಗಿರುವುದನ್ನು ನೋಡಿ ಸಾವತ್ರಕ್ಕನಲ್ಲಿ ಭಯ ಮೂಡಿತು.

"ಯಾಕೋ ಮಾತನಾಡುತ್ತಿಲ್ಲ?"

ತಾನು ಅಣ್ಣನ ಸುದ್ದಿ ಎತ್ತಿದ್ದೇ ತಪ್ಪಾಯಿತೆಂದು ಮೈದುನನಿಗೆ ಅನಿಸಿತು. ಅವನು ಹೆಂಡತಿಯ ಮುಖ ನೋಡಿದ. ಅಲ್ಲಿ 'ಹೇಳುವುದು ಬೇಡ' ವೆನ್ನುವ ಸೂಚನೆ ಕಂಡಿತು. ಅವನು ಮಾತಿಲ್ಲದೆ ಕುಳಿತುಕೊಂಡ.

"ಯಾಕೋ ನೀವಿಬ್ಬರು ಮುಖಮುಖ ನೋಡಿಕೊಂಡು ಕುಳಿತಿದ್ದೀರಿ? ಅಂ? ನನ್ನಿಂದ ಏನೋ ಮರೆಮಾಚುತ್ತಿದ್ದೀರಿ. ಹೌದಲ್ಲ?"

“ಏನಿಲ್ಲ ಅತ್ತಿಗೆ”

“ಏನಿಲ್ಲ? ಸುಳ್ಳು ಹೇಳಬೇಡ, ಗೊತ್ತಾಯ್ತಾ? ಸುಳ್ಳೇನಾದರೂ ಹೇಳಿದರೆ ಗೆದು ಬಡೀತೀನಿ ನೋಡು. ನಿನಗೆ ಇಷ್ಟು ಪ್ರಾಯವಾಗಿದೆ, ಮದುವೆಯಾಗಿದೆ, ಕ್ಕಳಾಗಿದೆ ಎಂದು ನಾನು ನೋಡುವುದಿಲ್ಲ, ಗೊತ್ತಾಯ್ತಾ? ಬೇಗ ಹೇಳು”

“ಹಾಗೇನಿಲ್ಲ ಅತ್ತಿಗೆ”

“ಮತ್ತೆ ಅದೇ ಮಾತು” ಅವಳ ಅಪನಂಬಿಕೆ ಹೆಚ್ಚುತ್ತಾ ಹೋಯಿತು.

“ಅವರನ್ನು ನೋಡಿದೆ ಎಂದು ಆಗ ಹೇಳಿದೆಯಲ್ಲ, ಅದು ಸತ್ಯ ಾನೇ?”

“ಅದು ಸತ್ಯ ಅತ್ತಿಗೆ”

“ಇನ್ನೇನು? ನೀನು ಅವರನ್ನು ನೋಡಿದೆಯಾದರೆ ಅವರು ಇಲ್ಲಿ ಯಾಕೆ ಬರಲಿಲ್ಲವೆನ್ನುವುದು ಕೂಡಾ ನಿನಗೆ ತಿಳಿದಿರಬೇಕಲ್ಲ. ಅವರ ಕೈಕಾಲು ಸರಿಯಾಗಿದೆ ತಾನೇ. ಅಥವಾ ಇಲ್ಲವೇ..”

“ಇದೆ ಅತ್ತಿಗೆ”

“ಮತ್ತಿನ್ನೇನು? ಮುಖ ಮರೆಸಿ ತಿರುಗಾಡುವುದು ಯಾಕಂತೆ? ನಾನು ಅವರಿಗೆ ಬೇಡವಾದೇನೆ? ಹಾಗಿರಲಾರದು ಕಣೋ. ಹೇಳು, ನೀನು ಹೇಳದೇ ಇದ್ದರೆ ನಾನು ನಾಳೆಯೇ ಜಲಗಾಂವ್‌ಗೆ ಹೊರಡುತ್ತೇನೆ. ಇಪ್ಪತ್ತೈದು ವರ್ಷ ಕಾದು ಕುಳಿತದ್ದು ಸುಮ್ಮನೆಯೇನಲ್ಲ. ನನಗೆ ಅವರನ್ನು ನೋಡಬೇಕು. ಅವರು ಇಲ್ಲಿ ಬರದಿದ್ದರೆ ನಾನು ಅಲ್ಲಿಗೆ ಹೋಗುವವಳೇ”

“ಅತ್ತಿಗೆ, ನೀನು ಹೋಗುವುದು ಬೇಡ. ಅಣ್ಣನಿಗೆ ಇಲ್ಲಿ ಬರಬೇಕೆಂದು ಅನ್ನಿಸದೇ ಇದ್ದಲ್ಲಿ ನೀನು ಯಾಕೆ ಹೋಗಬೇಕು? ಅವನು ಬಾರದಿರುವುದಕ್ಕೆ ಇಲ್ಲಿಯ ದಾರಿ ಮರೆತಿರುವುದು ಕಾರಣವಲ್ಲ. ನೀನು ಇಲ್ಲಿ ಒಬ್ಬಳೇ ಇರುವುದನ್ನು ಕೂಡಾ ಅವನು ಮರೆತಿಲ್ಲ. ಅವನಿಗೆ ಇಲ್ಲಿ ಬರುವುದು ಬೇಡವೆನಿಸಿತು. ಹಾಗಾಗಿ ಅವನು ಬರಲಿಲ್ಲ”

"ಅದು ಹೇಗೆ ಇಲ್ಲಿ ಬರುವುದು ಬೇಡವೆಂದು ಕಾಣಿಸಿದ್ದು? ನಾನ
ಅವರಿಗೆ ಬೇಡವಾದೇನೆ?"

ಆ ಮಾತಿಗೆ ಮೈದುನ ಏನೂ ಹೇಳಲಿಲ್ಲ. ಅವನು ಮತ್ತು ವಾರಗಿ
ಮೌನವಾಗಿರುವುದನ್ನು ನೋಡಿ ಸಾವತ್ರಕ್ಕನಿಗೆ ಭಯವೆನಿಸಿತು.

"ನಾನು ಅವರಿಗೆ ಬೇಡವಾದೇನೇ?"

"ಅತ್ತಿಗೆ, ನಿನಗೆ ಹೇಳುವುದು ಬೇಡವೆಂದುಕೊಂಡಿದ್ದೆ. ಆದರೆ ಹೇಳದೇ
ವಿಧಿಯಿಲ್ಲ"

ಸಾವತ್ರಕ್ಕನಿಗೆ ಎಲ್ಲವೂ ಸ್ಪಷ್ಟವಾಯಿತು. ಅವಳ ಎದೆಬಡಿತ ಹೆಚ್ಚಾಯಿತು

"ಅಲ್ಲಿ ಅವರಿಗೆ ಬೇರೆ ಹೆಂಡತಿ ಇದ್ದಾಳೆ. ಮಕ್ಕಳು ಕೂಡಾ ಇದ್ದಾರೆ.
ಯಾರಿಗೂ ಹೇಳುವುದು ಬೇಡವೆಂದು ಅವರು ಹೇಳಿದ್ದರು. ಆದರೆ ನಿನಗೆ
ಅದು ತಿಳಿಧಿರಲಿ ಅಂತ ಹೇಳ್ತಾ ಇದ್ದೇನೆ"

ಸಾವಿತ್ರಕ್ಕ ದೀರ್ಘವಾಗಿ ಉಸಿರೆಳೆದುಕೊಂಡಳು. ಸ್ವಲ್ಪ ಹೊತ್ತು
ಸುಮ್ಮನಿದ್ದು ಆಮೇಲೆ ಹೇಳಿದಳು-

"ಹೀಗೆ ಏನೋ ಇರಬೇಕೆಂದು ನನಗೂ ಹೊಳೆದಿತ್ತು ಕಣೋ. ಇರಲಿ,
ಇರಲಿ. ಎಲ್ಲಿಯೇ ಇದ್ದರೂ ಅವರು ಚೆನ್ನಾಗಿ ಇದ್ದರೆ ಸಾಕು. ನನಗೆ ಬೇರೆ
ಏನೂ ಬೇಡ. ಇಪ್ಪತ್ತೈದು ವರ್ಷಗಳ ನಂತರವಾದರೂ ಅವರು
ಸುಖವಾಗಿದ್ದಾರೆ ಎಂಬುದು ತಿಳಿಯಿತಲ್ಲ. ಅಷ್ಟು ಸಾಕು."

"ಅತ್ತಿಗೆ, ನೀನು ಏನೂ ತಿಳಿಯುವುದು ಬೇಡ ಆಯ್ತಾ? ಅಣ್ಣನ
ಸ್ವಭಾವ ನನಗೆ ಗೊತ್ತು. ಆದರೆ ಅವರು ಹೀಗೇನಾದರೂ ಮಾಡಬಹುದು
ಎಂದು ನಾನು ಕನಸಿನಲ್ಲಿಯೂ ಎಣಿಸಿರಲಿಲ್ಲ"

"ನನಗೇನೂ ಇಲ್ವೋ. ಐವತ್ತೆರಡು ವರ್ಷಗಳಲ್ಲಿ ಇಪ್ಪತ್ತೈದು ವರ್ಷಗಳು
ಹೀಗೆ ಕಳೆದವು. ಹೆಚ್ಚೆಂದರೆ ಇನ್ನು ಹತ್ತೋ ಹನ್ನೆರಡೋ ವರ್ಷ
ಉಳಿದಿರಬಹುದು.."

ಇಬ್ಬರೂ ವಿಷಯ ಬದಲಾಯಿಸಿದರು.

"ಅತ್ತಿಗೆ, ನಿನಗೆ ಆ ಮುರಳಿ ಗೊತ್ತಿರಬೇಕಲ್ಲ?"

"ಹುಂ"

"ಅವನಿಗೆ ಕೆಲಸ ಸಿಕ್ಕಿತ್ತಂತೆ"

"ಹೌದಂತೆ"

"ಪಾಪ ಬದುಕಿಕೊಂಡ."

ಸಾವಿತ್ರಕ್ಕ ತಲೆಯಲ್ಲಾಡಿಸಿದಳು.

"ಸುಮ್ಮನೆ ಅಲ್ಲಿ ಇಲ್ಲಿ ಓಡಾಡಿಕೊಂಡಿದ್ದ. ಯಾವಾಗಲೋ ಒಮ್ಮೆ ಇಂಟರ್‌ವ್ಯೂಗೆ ಹೋಗಿದ್ದನಂತೆ. ಆರ್ಡರ್ ಬಂದದ್ದು ಈಗ. ನಿನಗೆ ಅವನು ಹೇಳಲಿಲ್ಲವೇ?"

"ಇಲ್ಲಿಗೆ ಬಂದಿದ್ದ. ಹೇಳಿದ್ದಾನೆ."

"ನನಗೆ ಪತ್ರ ಬರೆದಿದ್ದ. ಹೀಗಾಗಿ ಅದು ನನಗೆ ತಿಳಿಯಿತು"

"...."

"ಅವನ ತಂಗಿಯ ಮದುವೆ ಆಯ್ತಾ, ಇಲ್ಲವಾ?"

"ಇಲ್ಲ"

"ಯಾಕೆ ಅವಳಿಗೆ ಮದುವೆ ಮಾಡಿಕೊಡುವ ವಿಚಾರ ಇಲ್ಲವೇ? ಅಥವಾ ಮದುವೆ ಮಾಡಲು ಹಣ ಇಲ್ಲವಾ? ಈ ಕಾಲದಲ್ಲಿ ಎಷ್ಟೋ ಹುಡುಗಿಯರಿಗೆ ಮದುವೆ ಇಲ್ಲದೆ ಇರುವುದಕ್ಕೆ ಆಗುತ್ತದೆ ಅಲ್ವಾ?"

"ಹುಂ"

"ಅಲ್ಲಿ ಶೋಲಾಪುರದಲ್ಲಿ ನಮ್ಮ ಮನೆಯ ಹತ್ತಿರ ಹೀಗೇ ಒಬ್ಬ ಹುಡುಗಿ ಇದ್ದಳು. ಅವಳಿಗೆ ಇಪ್ಪತ್ತೈದು ವರ್ಷವಾದರೂ ಆಗಿರಬೇಕು. ಮದುವೆಯಾಗಿರಲಿಲ್ಲ, ಮದುವೆ ಮಾಡಿಕೊಡಬೇಕೆಂದು ಕೂಡಾ ಯಾರಿಗೂ ಅನಿಸಿರಲಿಲ್ಲ. ಒಂದು ದಿನ ಯಾರದೋ ಹಿಂದೆ ಹೋಗಿಯೇಬಿಟ್ಟಳು"

"...."

"ಅತ್ತಿಗೆ, ನಾನು ಅಲ್ಲಿ ಫ್ಲಾಟ್ ತೆಗೆದುಕೊಳ್ಳಬೇಕು ಅಂತ ಯೋಚಿಸುತ್ತಿದ್ದೇನೆ. ನನ್ನ ಆಫೀಸಿನ ಹತ್ತಿರ ಒಂದು ಹೌಸಿಂಗ ಕಾಲೊನಿ ನಿರ್ಮಿಸುತ್ತಿದ್ದಾರೆ. ಕೆಲಸ ಇನ್ನೂ ಶುರುವಾಗಿಲ್ಲ. ಮಳೆಗಾಲ ಮುಗಿದ ನಂತರ ಪ್ರಾರಂಭಿಸುತ್ತಾರೆ ಅಂತ ಕಾಣುತ್ತೆ. ಈಗ ಫ್ಲಾಟ್ ಖರೀದಿಸಲು ಸಾಧ್ಯವಿರುವವರಿಂದ ಹಣ ಸಂಗ್ರಹ ಮಾಡುತ್ತಿದ್ದಾರೆ. ನಾನು ಒಂದು ಫ್ಲಾಟ್ ತೆಗೆದುಕೊಂಡರೆ ಹೇಗೆ ಎಂದು ಆಲೋಚಿಸುತ್ತಿದ್ದೇನೆ. ನೀನು ಏನು ಹೇಳುತ್ತಿ?"

"..."

"ಅತ್ತಿಗೆ.."

"ಹಾಂ!"

ಮೈದುನ ಅವಳ ಮುಖದತ್ತ ದೃಷ್ಟಿ ಬೀರಿದ, "ಯಾಕೆ ಏನೂ ಮಾತನಾಡುತ್ತಿಲ್ಲ?"

"ಆಂ, ಏನು ಹೇಳಿದೆ ನೀನು?"

ಅವನು ಮತ್ತೆ ಅದನ್ನೇ ಹೇಳಿದ, "ನಾನು ಶೋಲಾಪುರದಲ್ಲಿ ಒಂದು ಫ್ಲಾಟ್ ತೆಗೆದುಕೊಳ್ಳಬೇಕೆಂದು ಯೋಚಿಸುತ್ತಿದ್ದೇನೆ"

"ಆಂ–ಹಾಂ. ತೆಗೆದುಕೋ ಅದರಲ್ಲೇನು? ಒಳ್ಳೆಯದಲ್ಲವೇ.."

ಮಕ್ಕಳು ಓಡುತ್ತಾ ಬಂದರು.

"ಅಮ್ಮಾ, ಅಮ್ಮಾ.. ಆ ಹಸು ಇವನಿಗೆ ಹಾಯಲು ಬಂತು ನೋಡು"

"ಹಾಯಲು ಬಂತಾ?"

"ನನಗಲ್ಲ, ಅವನಿಗೆ. ಅವನು ಹಾಲು ಕರೆಯಲು ಹೋಗಿದ್ದ"

"ಒಳ್ಳೆಯದಾಯ್ತು ಬಿಡು. ನಾಳೆಯಿಂದ ಬೆಳಿಗ್ಗೆ ಎದ್ದು ಎಲ್ಲರ ಮನೆಗೂ ಹಾಲು ಕರೆಯಲು ಹೋಗುವಿಯಂತೆ"

ತಪ್ಪು ಮಾಡಿದವ ತುಟಿ ಕಚ್ಚುತ್ತಾ ನಿಂತುಕೊಂಡ.

"ಅತ್ತಿಗೆ. ನಾನು ಹೊರಗೆ ಹೋಗಿ ಬರ್ತೀನಿ. ಹೀಗೆ ಪರಿಚಿತರನ್ನು ಂಡು ಬರುತ್ತೇನೆ"

"ಆಂ"

"ಭಾಪ್ಪಾ, ನಾನೂ ಬರ್ತೇನೆ"

"ಬಾ"

ತಂದೆ ಮತ್ತು ಮಕ್ಕಳು ಹೊರಟರು. ಮಧ್ಯಾಹ್ನದ ಅಡುಗೆ ತಯಾರಿಗೆಂದು ಸಾವತ್ರಕ್ಕ ಅಡುಗೆ ಮನೆ ಸೇರಿದಳು. ಅಲ್ಲಿ ಕೈತುಂಬಾ ಲಸವಿತ್ತು. ಅವಳು ಮತ್ತು ವಾರಗಿತ್ತಿ ಇಬ್ಬರೂ ಅದರಲ್ಲಿ ತಲ್ಲೀನರಾದರು. ಸುಮಾರು ಎರಡು ಗಂಟೆಗೆ ತಂದೆ, ಮಕ್ಕಳು ಕಾಣಿಸಿಕೊಂಡರು. ಸಾತುಕತೆಯಲ್ಲಿ ಅವರ ಊಟ ಮುಗಿಯಿತು. ಊಟ ಮುಗಿದೊಡನೆ ಅಡ್ಡಾದರು. ತಕ್ಷಣ ಅವರಿಗೆ ನಿದ್ದೆ ಕೂಡಾ ಆವರಿಸಿತು. ಅವರ ಬೆನ್ನಿಗೆ ಹೆಂಗಸರು ಕೂಡಾ ಊಟ ಮುಗಿಸಿ ಮಲಗಿದರು.

ಕಣ್ಣು ಮುಚ್ಚಿ ಮಲಗಿದ ಸಾವತ್ರಕ್ಕ ಎಚ್ಚರವಾಗಿಯೇ ಉಳಿದಳು.

– ಕೊನೆಗೆ ಅಂತ್ಯ ಹೀಗಾಯಿತು! ನನ್ನ ಬೆನ್ನ ಮೇಲೆ ತಿವಿಯಲಾಯಿತು! ಇಷ್ಟು ಕಾಲ ನಿರೀಕ್ಷೆಯಲ್ಲಿ ಕಳೆದೆ. ಅವರು ಇವತ್ತು ಬರುತ್ತಾರೆ–ಹಿಂದೆ ನಿಂತು ಸಾವಿತ್ರೀ ಎಂದು ಕರೆಯುತ್ತಾರೆ–ನಾನು ಹಿಂದೆ ತಿರುಗಿ ನೋಡಿದರೆ ಚೂರಿ ತೆಗೆದು ಚುಚ್ಚುತ್ತಾರೆ– ತಗೋ ನಿನಗೆ–ಇಪ್ಪತ್ತೈದು ವರ್ಷ ಕಣ್ಣಿಗೆ ಎಣ್ಣೆ ಹಾಕಿ ದಾರಿ ನೋಡುತ್ತಾ ನಿಂತಿದ್ದಿಯಲ್ಲ?– ತಗೋ! ನಾನು ಬರುವಾಗ ಓಡಿ ಬಂದು ಕುತ್ತಿಗೆಗೆ ಮಲ್ಲಿಗೆ ಹಾರ ಹಾಕಲು ಕಾದಿದ್ದೆಯೇನು? ಛೆ! ಛೆ! ನೆ!

– ದೇವರೇ ನಾನು ಏನು ತಪ್ಪು ಮಾಡಿದೆ? ನನ್ನ ಮದುವೆ ಕೂಡಾ ಬೇರೆಯುವರ ಹಾಗೆಯೇ ನಡೆಯಿತು. ಆರು ವರ್ಷಗಳ ನಂತರ ನನಗೆ ಸಂದೇಶ ಬಂತು –ನಿನ್ನ ಗಂಡ ಸತ್ತು ಹೋದ. ಇವತ್ತು ಮೈದುನ ಬಂದು

ಹೇಳುತ್ತಾನೆ–ನಿನ್ನ ಗಂಡ ಜೀವಂತ ಇದ್ದಾನೆ. ಆದರೆ ನೀನು ಅವ
ಬೇಡ. ಹೇಳು, ನಾನು ಮಾಡಿದ ತಪ್ಪು ಯಾವುದು? ಈ ಎಲ್ಲಾ ತೊಂದರೆಗ
ನನಗೆ ಮಾತ್ರ ಯಾಕೆ? ನಾನು ಒಂದು ಇರುವೆಗೆ ಕೂಡಾ ನೋಯಿಸಿ
ಹಾಗಿದ್ದ ಮೇಲೆ ನೀನು ನನ್ನನ್ನು ಮಾತ್ರ ಯಾಕೆ ಆಯ್ಕೆ ಮಾಡಿಕೊಂಡ

– ಪೂರ್ವ ಜನ್ಮದ ಪಾಪದ ಫಲವೆಂದು ತಿಳಿದರಾಯಿತು. ವ
ಏನೆಂದು ಹೇಳಲಿ? ಆದರೂ ನನಗೇ ಹೀಗೆ..

– ಬಿಡು..ಹಣೆಬರಹ, ಮತ್ತೇನಲ್ಲ!

– ಇನ್ನು ಜೀವ ಹಿಡಿದು ಏನು ಪ್ರಯೋಜನ? ಇದುವರೆಗೆ ಅವ
ಬರಬಹುದು ಎನ್ನುವ ಒಂದು ಉದ್ದೇಶವಿತ್ತು. ಇನ್ನು ಮುಂದೆ? ಏನ
ಇಲ್ಲ. ಏನೂ ಇಲ್ಲ. ಯಾವುದೋ ಒಂದು ದಿನ ಬಂದು ಅಂಗಳದ
ನಿಂತು ಕರೆಯುತ್ತಾರೆ– ಸಾವಿತ್ರೀ! ನಿನಗೆ ಇವಳ ಪರಿಚಯವಿದೆಯೇನ
ಇವಳು ನನ್ನ ಕೈಹಿಡಿದ ಹೆಂಡತಿ. ನಾನು ನಿನಗೆ ಮನೆ ಬಿಟ್ಟು ಹೋ
ಎಂದು ಹೇಳುವುದಿಲ್ಲ ಆಂ? ನೀನೂ ಇರು.

– ಅದು ನಡೆಯುವ ಮೊದಲೇ ಜೀವ ಕಳೆದುಕೊಳ್ಳುವುದು ಒಳ್ಳೆದ
ಆ ಹೊಳೆಗೆ ಹೋಗಿ ಮುಳುಗಿದರಾಯಿತು. ನಾಳೆ ಮೇಲೆ ತೇಲಿ ಬರುತ್ತೇ
ಏನೂ ಇಲ್ಲದಿದ್ದರೂ ಮುಕ್ತಿ ಸಿಗುತ್ತದೆ. ಇವತ್ತೇ ಸತ್ತರೆ ಒಳ್ಳೆಯದು. ಹೇಗ
ಮೈದುನ ಇದ್ದಾನೆ. ಅವರಿಗೆ ತಂತಿ ಕಳುಹಿಸಬಹುದು. ಸುದ್ದಿ ತಿಳಿದಾ
ಅವರಿಗೆ ಏನನ್ನಿಸಬಹುದು? ದುಃಖವಾಗಬಹುದೇ? ಅವರ ಅಂತಃಕರ
ಅವರನ್ನು ಅಪರಾಧಿಯೆಂದು ಶಪಿಬಹುದೇ? ಅಥವಾ ಸತ್ತು ಹೋದಳಲ
ಒಳ್ಳೇಯದಾಯ್ತು ಎಂದು ಒಳಗೊಳಗೆ ಸಂತೋಷಪಡಬಹುದೇ?

– ಬೇಡ. ಹೇಗೂ ನಾನು ಅವರಿಗೆ ಬೇಡವಾಗಿದ್ದೇನೆ. ಹಾಗಿ
ಮೇಲೆ ನಾನು ಸತ್ತರೂ, ಬದುಕಿದರೂ ಅವರಿಗೇನು? ಸತ್ತಳೆಂದು ತಿಳಿದರು
ಹೆಚ್ಚು ಕಾಳಜಿ ತೋರಿಸಲಿಕ್ಕಿಲ್ಲ. ಹಾಗೆ ನನ್ನ ಕುರಿತು ಚಿಂತಿಸುವವರಾಗಿದ್ದ
ಕಳೆದ ಇಪ್ಪತ್ತೈದು ವರ್ಷಗಳಲ್ಲಿ ಒಂದು ಬಾರಿಯಾದರೂ ಬರುತ್ತಿರಲಿಲ್ಲವೇ
ಅವರಿಗೆ ಖಂಡಿತವಾಗಿಯೂ ನಾನು ಬೇಡವಾಗಿದ್ದೇನೆ.

– ಮುಂದೆ ಏನು ಮಾಡಲಿ? ಮುಂದೆ? ನನ್ನ ಭವಿಷ್ಯ ಈಗ ಮೇಲಿನವನ ಕೈಯಲ್ಲಿ ಇದೆ. ಯಾರಿಗಾಗಿ ಬದುಕಲಿ? ಯಾರಿಗಾಗಿ ಈ ಬಂಡಿ ಎಳೆಯಲಿ? ಯಾರ ಫಸಲಿಗಾಗಿ ನನ್ನ ನೇಗಿಲು ನಡೆಸಲಿ? ನನ್ನವರೆಂದು, ನನಗಾಗಿ ಎಂದು ಏನೂ ಇರಲಾರದು. ಇನ್ನೂ ಮುಗಿದಿಲ್ಲ ಎನ್ನುವ ಕಾರಣಕ್ಕಾಗಿ ಮಾತ್ರ ಬದುಕಿರಬೇಕು.

– ನೀನು ಅವಲಕ್ಷಣವನ್ನೇ ಯೋಚಿಸುತ್ತಿದ್ದಿ. ಮಗನ ಹಾಗೆ ಮೈದುನನಿಲ್ಲವೇ? ಅವನನ್ನು ಸಾಕಿ ಬೆಳೆಸಿದೆಯಲ್ಲ? ಅವನಿಗಾಗಿ ನಿನ್ನಲ್ಲಿ ಪ್ರೀತಿ ಇಲ್ಲವೇನು!

– ಹಾಗಲ್ಲ. ಆದರೆ ಅವನಿಗೆ ಅವನ ಹೆಂಡತಿ, ಮಕ್ಕಳು ಇದ್ದಾರೆ. ಹೆಂಡತಿ, ಮಕ್ಕಳ ಮುಂದೆ ಅತ್ತಿಗೆ ಯಾರು? ಅವನು ಸ್ವಲ್ಪ ಕಾಲ ನನ್ನನ್ನು ನೋಡಿಕೊಳ್ಳಬಹುದು. ಆದರೆ ಖಾಯಂ ಆಗಿಯಂತೂ ಅಲ್ಲ. ಅದು ಸರಿಯಾಗುವುದೂ ಇಲ್ಲ. ಯಾವುದೇ ರೀತಿಯಿಂದಲೂ ಅದು ಸರಿಯಾಗುವಂತಹದಲ್ಲ. ಈಗ ದಾರಿ ಒಂದೇ– ಹೊಳೆಗೆ ಹೋಗಿ ಜೀವ ಕಳೆದುಕೊಳ್ಳುವುದು. ಇಲ್ಲದಿದ್ದರೆ ಅಟ್ಟ ಹತ್ತಿಕೊಂಡು ನೇಣು ಬಿಗಿದುಕೊಳ್ಳುವುದು...

ಹೊರಗಿನಿಂದ ಹಸುವಿನ ಕೂಗು ಕೇಳಿಬಂತು. ಸಾವತ್ರಕ್ಕ ಎದ್ದು ಹಸುವನ್ನು ಹಟ್ಟಿಯಲ್ಲಿ ಕಟ್ಟಿಬಂದಳು. ಹಾಲು ಕರೆಯುವ ಸಮಯವಾಗಿದೆ. ಅವಳು ಅಭ್ಯಾಸಬಲದಿಂದ ಹಾಲಿನ ಪಾತ್ರೆ ಹಿಡಿದು ಬಂದಳು. ಯಾಂತ್ರಿಕವಾಗಿ ಕೆಚ್ಚಲಿಗೆ ಕೈಹಾಕಿದಳು.

ಸ್ವಲ್ಪ ಹೊತ್ತಿನಲ್ಲಿ ಅವಳ ಗಿರಾಕಿಗಳು ಬಂದು ತಲುಪಿದರು. ಅವಳು ಅವರಿಗೆ ಹಾಲು ನೀಡಿದಳು. ಆಮೇಲೆ ಹೆಚ್ಚು ಮಾತಿಲ್ಲದೆ ಸಮಯ ಕಳೆದಳು. ಆ ರಾತ್ರಿ ಶ್ರೀನಿವಾಸ ತನ್ನ ಹೆಂಡತಿಯಲ್ಲಿ ಹೇಳಿದ,

“ಅತ್ತಿಗೆಗೆ ದೊಡ್ಡ ಆಘಾತವೇ ಆಗಿದೆ”

“ನನಗೆ ಗೊತ್ತಿದೆ. ಗಂಡ ಬಿಟ್ಟು ಹೋಗಿದ್ದಾನೆಂದು ತಿಳಿದರೆ ಯಾರಿಗಾದರೂ ಹಾಗೇ ಆಗುವುದಲ್ಲವೇ? ಅವರಿಗೆ ವಿಷಯ ತಿಳಿಸುವುದು ಬೇಡವೆಂದು ಮೊದಲೇ ನಾನು ನಿಮಗೆ ಎಚ್ಚರಿಸಿದ್ದೆ”

"ಏನೋ ಮಾತಿನಲ್ಲಿ ಅಣ್ಣನನ್ನು ನೋಡಿದ ವಿಷಯ ಬಂತು. ಆಮೇ
ಏನನ್ನೂ ಅಡಗಿಸಿಡುವುದು ಸಾಧ್ಯವಾಗಲಿಲ್ಲ"

"ಬಿಡಿ, ಎರಡು ಮೂರು ದಿನಗಳಲ್ಲಿ ಸರಿಯಾಗಬಹುದು"

"ಅವರು ತುಂಬಾ ಭಾವುಕರು. ಆ ದಿನ ಟೆಲಿಗ್ರಾಮ್ ಬಂದಿತ್ತ
ಆಮೇಲೆ ಎಷ್ಟು ದಿನ ಗೊಣಗಿಕೊಂಡಿದ್ದರು ಗೊತ್ತೇನು?"

"ನಾವು ಈಗ ತಿಳಿಸಿದ ವಿಚಾರ ಆಗಿನಷ್ಟು ಶಾಕಿಂಗ್ ಅಲ್ಲವಲ್ಲ?"

"ಟೆಲಿಗ್ರಾಮ್‌ನಲ್ಲಿದ್ದ ಸುದ್ದಿ ತಪ್ಪು ಎಂದು ಎಷ್ಟೋ ಜನ ಅವರಿ
ಹೇಳಿದ್ದರಲ್ಲ. ಆದರೆ ಇವತ್ತು ಹಾಗಲ್ಲ. ಅಣ್ಣನನ್ನು ಭೇಟಿಯಾಗಿರುವ ವಿಚಾ
ಸ್ವತಃ ನಾನೇ ಹೇಳಿದ್ದೇನೆ. ಅವರು ಮತ್ತೆ ಮದುವೆಯಾದ ವಿಚಾರವನ
ಕೂಡಾ ನಾನೇ ಹೇಳಿದ್ದೇನೆ. ಈ ಬಾರಿ ಅವರು ಕೇಳಿದ್ದು ತಪ್ಪೆಂದು ಹೇಳುವು
ಹೇಗೆ? ಛೇ! ಹೇಳಲೇ ಬಾರದಿತ್ತು. ಈಗ ಏನು ಮಾಡಲಿ?"

"ನೀವು ಹೆದರುವುದು ಬೇಡ. ಇಲ್ಲಿ ನಾನಿದ್ದೇನಲ್ಲ, ನೋಡ್ಕೊಳ್ತೀನಿ

"ಅವರಿಗೆ ಸ್ವಲ್ಪ ಸಮಾಧಾನ ಮಾಡು. ಆಯ್ತಾ?"

"ಸರಿ"

ಮುಂಜಾನೆ ಹೊತ್ತು. ಯಾರೂ ಹೊರಗಿನಿಂದ ಸಾವತ್ರಕ್ಕನನ
ಕರೆಯುವುದು ಕೇಳಿ ಶ್ರೀನಿವಾಸನಿಗೆ ಎಚ್ಚರವಾಯಿತು. ಅವನು ಗಡಿಯಾ
ನೋಡಿಕೊಂಡ. ಗಂಟೆ ಏಳೂವರೆ. ಅವನ ಹೆಂಡತಿ, ಮಕ್ಕಳು ಒ
ನಿದ್ದೆಯಲ್ಲಿದ್ದಾರೆ. ಅವನು ಎದ್ದು ಹೊರಬಂದ. ಮುಂಬಾಗಿಲಿಗೆ ಚಿಲ
ಹಾಕಿರಲಿಲ್ಲ. ಬಾಗಿಲು ತೆರೆದು ನೋಡಿದರೆ ಸಾವತ್ರಕ್ಕನ ಗಿರಾಕಿ ಬಂ
ನಿಂತಿದ್ದಾನೆ.

"ಸಾವತ್ರಕ್ಕ ಇಲ್ಲವೇನು?"

"ಇದ್ದಾರಲ್ಲ"

ಅವನು ಕೂಡಲೇ ಕೈಯಲ್ಲಿದ್ದ ಪಾತ್ರೆಯನ್ನು ಮುಂದೆ ಚಾಚಿ ಹಿಡಿ
"ಹಾಲು"

ಶ್ರೀನಿವಾಸ ಪಾತ್ರೆ ಹಿಡಿದು ಒಳಗೆ ಬಂದ. ಸಾವಿತ್ರಕ್ಕನನ್ನು ಕರೆಯಲು ಅಡುಗೆ ಮನೆಗೆ ಹೋದರೆ ಅಲ್ಲಿ ಅವಳಿರಲಿಲ್ಲ. ಬೇರೆ ಯಾವ ಕೋಣೆಯಲ್ಲಿಯೂ ಇರಲಿಲ್ಲ. ಅವನಿಗೆ ಮೂಲೆ ಕೋಣೆಯಲ್ಲಿ ಗೋಡೆಗೆ ಒರಗಿಸಿಟ್ಟ ಏಣಿ ಕಂಡಿತು. ಅದನ್ನು ಹತ್ತಿಕೊಂಡು ಅಟ್ಟಕ್ಕೆ ಹೋಗಬಹುದಿತ್ತು. ತಕ್ಷಣ ಅವನ ಮನಸ್ಸಿಗೆ ನಿನ್ನೆ ನಡೆದ ಘಟನೆ ಮತ್ತು ಅದು ಅತ್ತಿಗೆಯ ಮೇಲೆ ಬೀರಿದ ಪರಿಣಾಮ ನೆನಪಿಗೆ ಬಂತು. ಅವನ ದೇಹ ನಡುಗಿತು. ಅತ್ತಿಗೆ ಅಟ್ಟ ಹತ್ತಿಹೋಗಿ ಏನು ಮಾಡುತ್ತಿರಬಹುದು? ಏನು ಮಾಡಿರಬಹುದು? ಅವನಿಗೆ ಗೊಂದಲವಾಯಿತು. ಸ್ವಲ್ಪ ಹೊತ್ತಿನ ನಂತರ ತನ್ನನ್ನು ಸಂಭಾಳಿಸಿಕೊಳ್ಳುತ್ತಾ ನಡಗುವ ಕೈಯಿಂದ ಹಾಲಿನ ತಂಬಿಗೆಯ ಮುಚ್ಚಳ ತೆರೆದು ನೋಡಿದ. ತಂಬಿಗೆ ಖಾಲಿ ಇತ್ತು. ಬೇರೆ ಯಾವ ಪಾತ್ರೆಗಳಲ್ಲಿಯೂ ಹಾಲು ಇರಲಿಲ್ಲ. ಅವನಿಗೆ ಮತ್ತಷ್ಟು ಗಲಿಬಿಲಿಯುಂಟಾಯಿತು. ಅವನು ಹೊರಗೆ ಬಂದು ಹೇಳಿದ,

"ಹಾಲು ಇಲ್ಲವೆಂದು ಕಾಣುತ್ತೆ"

"ಯಾಕೆ?" ಗಿರಾಕಿ ಆಶ್ಚರ್ಯದಿಂದ ಕೇಳಿದ.

"ಹಾಲು ಕರೆದಿಲ್ಲವೆಂದು ಕಾಣುತ್ತೆ"

"ಹೌದಾ? ಇವತ್ತೇನಾಯ್ತು? ಸಾವಿತ್ರಕ್ಕನಿಗೆ ಹುಷಾರಿಲ್ವಾ?"

"ಹಾಗೇನಿಲ್ಲ. ಏಳಲು ತುಸು ತಡವಾಗಿರಬಹುದು"

ಗಿರಾಕಿ ಏನು ಮಾಡುವುದೆಂದು ತೋಚದೆ ಅಲ್ಲಿಯೇ ನಿಂತುಕೊಂಡ.

"ಸ್ವಲ್ಪ ಸಮಯ ಕಳೆದು ಬಾ, ನೋಡೋಣ"

"ಸರಿ"

ಅವನು ಅಲ್ಲಿಂದ ಮರೆಯಾದ ಕೂಡಲೇ ಶ್ರೀನಿವಾಸ ತಕ್ಷಣ ಒಳಗೆ ಹೋದ. ಮಲಗಿಕೊಂಡಿದ್ದ ಹೆಂಡತಿಯನ್ನು ಎಬ್ಬಿಸಿದ. ಕೋಣೆಗೆ ಕರೆತಂದು ಏಣಿಯನ್ನು ತೋರಿಸಿದ. ಏಣಿಯನ್ನು ನೋಡಿದ ಕೂಡಲೇ ಅವನಿಗೆ ಬಂದ ಆಲೋಚನೆ ಅವಳಲ್ಲಿಯೂ ಕಾಣಿಸಿತು. ಅವಳಿಗೂ ಹೆದರಿಕೆಯಾಯಿತು.

"ಏನಾಗಿದೆ ಅಂತ ಮೇಲೆ ಹೋಗಿ ನೋಡಿ ಬರ್ತೇನೆ" ಶ್ರೀನಿವಾಸ ಹೇಳಿದ. ಹೆಂಡತಿ ತನ್ನ ನಡುಕವನ್ನು ನಿಯಂತ್ರಿಸುವ ಪ್ರಯತ್ನದಲ್ಲಿದ್ದಾಗ ಅವನು ಏಣಿಯ ಮೇಲೆ ಕಾಲಿಟ್ಟ. ನಿಧಾನವಾಗಿ ಹತ್ತಿ ಮೇಲೆ ಹೋದ. ಅಟ್ಟದ ಮಂದ ಬೆಳಕಿನಲ್ಲಿ ಮೂಲೆಯಲ್ಲಿ ಕುಳಿತಿರುವ ಅತ್ತಿಗೆಯ ನಿಶ್ಚಲ ಆಕೃತಿ ಅವನಿಗೆ ಕಂಡಿತು. ಅವಳು ಅವನಿಗೆ ಬೆನ್ನು ಹಾಕಿ ಕುಳಿತಿದ್ದಳು. ಒಂದು ಕೈಯನ್ನು ನೆಲಕ್ಕೆ ಊರಿ ಇನ್ನೊಂದು ಕೈಯಲ್ಲಿ ಏನೋ ಹಿಡಿದಿದ್ದಳು. ಅವನ ಎದೆ ಬಡಿತ ತೀವ್ರವಾಯಿತು.

"ಅತ್ತಿಗೆ!"

"ಶೂ.." ಅವಳು ತುಟಿಯ ಮೇಲೆ ಬೆರಳಿಟ್ಟು ಸನ್ನೆ ಮಾಡಿದಳು. ಆಮೇಲೆ ಪೇರಿಸಿಟ್ಟ ವಸ್ತುಗಳ ನಡುವೆ ನೋಡುವಂತೆ ತಿಳಿಸಿದಳು. ಅಲ್ಲಿ ಈಗ ತಾನೇ ಜನ್ಮ ತಾಳಿದ ಮೂರು ಬೆಕ್ಕಿನ ಮರಿಗಳು ಪರಸ್ಪರ ತಬ್ಬಿಕೊಂಡು ಮಲಗಿದ್ದವು. ಅವುಗಳನ್ನೇ ನೋಡುತ್ತಾ ಅವಳು ಕುಳಿತಿದ್ದಳು.

"ಅತ್ತಿಗೆ," ಶ್ರೀನಿವಾಸ ಮತ್ತೆ ಅವಳನ್ನು ಕರೆದ. "ಇವತ್ತು ಹಾಲು ಕರೆದಿಲ್ಲವೇನು? ಹಾಲಿಗಾಗಿ ಒಬ್ಬ ಬಂದಿದ್ದ. ನಿನ್ನನ್ನು ಕರೆಯುತ್ತಿದ್ದ. ನಿನಗೆ ಕೇಳಿಸಲಿಲ್ವಾ"

"ಗಂಟೆ ಎಷ್ಟಾಯಿತು?"

"ಏಳು ಮುಕ್ಕಾಲು. ಇಲ್ಲಿ ಕುಳಿತು ಏನು ಮಾಡುತ್ತಿದ್ದಿಯಾ?"

"ಏನಿಲ್ಲ"

"ಕೆಳಗೆ ಹೋಗೋಣ"

"ಸರಿ," ಪಾತ್ರೆಯೊಂದನ್ನು ಅವನ ಕೈಗೆ ನೀಡುತ್ತಾ ಹೇಳಿದಳು, "ಇದನ್ನು ಕೆಳಗಿಳಿಸಿಬಿಡು"

ಶ್ರೀನಿವಾಸ ಪಾತ್ರೆ ಹಿಡಿದು ಕೆಳಗಿಳಿದ. ಅವನ ಹಿಂದೆ ಅವಳು ಕೂಡಾ ಬಂದಳು. ವಾರಗಿತ್ತಿಯ ಮುಖದಲ್ಲಿದ್ದ ಭೀತಿ ನೋಡಿದ ಕೂಡಲೇ ಅವಳಿಗೆ ಅವರ ತಳಮಳ ಅರ್ಥವಾಯಿತು.

“ನಾನು ಸತ್ತು ಹೋದೆ ಎಂದು ನೀವು ತಿಳಿದುಕೊಂಡಿರುವ ಹಾಗಿದೆ?”

ಅವರು ಯಾವ ಮಾತೂ ಆಡಲಿಲ್ಲ.

‘ಹಾಗೇನಿಲ್ಲ, ನಾನು ಯಾಕೆ ಸಾಯಬೇಕು?’ ಎಂದು ಕೇಳಬೇಕೆನಿಸಿತು ಅವಳಿಗೆ. ಜೊತೆಗೆ ಭಾವನೆಗಳು ಉಕ್ಕಿಬಂದವು. ಆದರೆ ಅವಳು ಎಲ್ಲವನ್ನೂ ನುಂಗಿಕೊಂಡಳು. ಒಂದೇ ಒಂದು ಭಾವವನ್ನು ಪ್ರಕಟಿಸುವುದು ಮಾತ್ರ ಅವಳಿಂದ ಸಾಧ್ಯವಾಯಿತು.

“ಕೇವಲ ಒಬ್ಬನಿಗಾಗಿ ನಾನು ಇಪ್ಪತ್ತೈದು ವರ್ಷ ಕಾದು ಕುಳಿತಿದ್ದೆ. ಇನ್ನು ಮುಂದೆ ಇನ್ನೊಬ್ಬನಿಗಾಗಿ ಕಾಯಬೇಕಾಗಿದೆ. ಅವನು ಕೋಣನ ಮೇಲೆ ಕುಳಿತು, ಪಾಶ ಹಿಡಿದು ಯಾವಾಗ ಬರುವನೋ. ಅಲ್ಲಿಯವರೆಗೆ ಹೀಗೇ ನಡೆಯಲಿ”

ಶ್ರೀನಿವಾಸ, ಅವನ ಹೆಂಡತಿ ಮೌನವಾಗಿದ್ದರು. ಹೊರಗೆ ಸದ್ದಾಯಿತು.

“ಸಾವಿತ್ರಕ್ಕಾ?”

ಅವಳು ಹೊರಗೆ ಹೋಗಿ ಸ್ವಲ್ಪ ಹೊತ್ತು ಬಿಟ್ಟು ಅದೇ ರೀತಿ ಒಳಗೆ ಬಂದಳು. ಹಾಲಿನ ತಂಬಿಗೆ, ನೀರಿನ ಪಾತ್ರೆ, ಎಣ್ಣೆಯ ಡಬ್ಬಿ ಹಿಡಿದು ಹಟ್ಟಿಗೆ ಹೋದಳು. ಹಸುಗಳು ಅವಳ ದಾರಿ ಕಾಯುತ್ತಿದ್ದವು. ಅವಳು ಅವುಗಳಿಗೆ ಹುಲ್ಲು ಹಾಕಿದಳು. ನೀರು ನೀಡಿದಳು. ಆಮೇಲೆ ಕೆಚ್ಚಲನ್ನು ನೀರಿನಿಂದ ತೊಳೆದಳು. ಅದಕ್ಕೆ ಎಣ್ಣೆ ಹಚ್ಚಿದಳು. ಇಷ್ಟು ಮಾಡುವಷ್ಟರಲ್ಲಿ ಅವಳಿಗೆ ಸುಸ್ತಾಯಿತು. ಅವಳ ಶ್ರದ್ಧೆ ತಪ್ಪಿಹೋಯಿತು. ಬೆರಳುಗಳು ಕೆಚ್ಚಲಿನ ಮೇಲೆ ಕೈ ಚಲಿಸದಾದವು. ಅವಳು ನೋಡುತ್ತಾ ಕುಳಿತಳು.



# ಋತು ಸಂಕ್ರಮಣ

ಇನ್ನು ಮೂರು ದಿನಗಳು ಉಳಿದಿವೆ. ಹೊರಟು ನಿಂತಾಗ ಈ ವಿಚಾ
ಮನಸ್ಸಿಗೆ ಬಂತು–ಇನ್ನು ಮೂರೇ ದಿನಗಳು ಉಳಿದಿವೆ. ನಿಖರವಾ
ಹೇಳುವುದಾದರೆ ಎರಡು ದಿನ ಮತ್ತು ಕೆಲವು ಗಂಟೆಗಳು ಮಾತ್ರ. ಎ
ದಿನಗಳಲ್ಲಿ ಕಚೇರಿಗೆ ಹೋಗುವವನಿದ್ದೇನೆ. ಕೊನೆಯ ದಿನ ಸಂಜೆ ನಾಲ
ಗಂಟೆ ಸುಮಾರಿಗೆ ಒಂದು ಸ್ಟಾಫ್ ಮೀಟಿಂಗ್ ನಡೆಯುತ್ತದೆ. ಬೀಳ್ಕೊಡುಗೆಯ
ಭಾಷಣ ಜರಗುವುದು. ಹಾರ ಹಾಕಬಹುದು. ನೆನಪಿನ ಕಾಣಿಗೆ ನೀಡಬಹುದು
ರಿಲಿವಿಂಗ್ ಆರ್ಡರನೊಂದಿಗೆ ಪಿಎಫ್ ಮತ್ತು ಗ್ರಾಚ್ಯುಯಿಟಿ ಚೆಕ್ ಕೈಗ
ಸೇರಿದ ಕೂಡಲೇ ನಾನು ನಿವೃತ್ತನಾಗುತ್ತೇನೆ. ನಲವತ್ತು ವರ್ಷಗಳ ಸರ್ವಿಸ
ಮುಗಿದು ನಾನು ಸಂಸ್ಥೆಗೆ ಹೊರಗಿನವನಾಗುತ್ತೇನೆ...

ಮೂರು ತಿಂಗಳು ಮೊದಲೇ ಇಂತಹ ತಾರೀಖಿನಂದು ಸೂಪರ್
ಅನುವೇಶನ್ ಆಗುವುದಿದೆ ಎಂಬುದಾಗಿ ಸೂಚನಾಪತ್ರ ಬಂದಿತ್ತು. ಕೌಂಟ್
ಡೌನ್ ಪ್ರಾರಂಭವಾಗಿದೆ ಎಂದು ನಗುತ್ತಾ ಆಗ ಜಾಹೀರು ಪಡಿಸಿದ್ದೆ 90–
89–88–87.. ಈಗ ಮೂರು ದಿನಗಳು ಮಾತ್ರ ಉಳಿದಿವೆ...

ನೌಕರಿಗೆ ಸೇರಿದಾಗ ನನಗೆ ಪ್ರಾಯ ಹದಿನೆಂಟು ವರ್ಷ. ಮೊದಲ
ದಿನವನ್ನು ಗೊಂದಲದಲ್ಲಿ ಕಳೆದಿದ್ದೆ. ಹೊಸ ಉದ್ಯೋಗ, ಹೊಸ ಊರು,
ಹೊಸ ಜನ ಮತ್ತು ಅಪರಿಚಿತ ಭಾಷೆ. ಗುರುತಿನವರೆಂದು ಹೇಳಿಕೊಳ್ಳುವವರು
ಯಾರೂ ಇರಲಿಲ್ಲ. ಆದರೆ ಎಲ್ಲವನ್ನೂ ತಿಳಿದುಕೊಳ್ಳುವ ಉತ್ಸಾಹ ಇತ್ತು.
ಮೊದಲ ದಿನ ತಲ್ಲೀನನಾಗಿ ಕೆಲಸ ಮಾಡುತ್ತಾ ಮುಸ್ಸಂಜೆ ಹೊತ್ತಿಗೆ ಕೋಣೆ
ತಲುಪಿದ್ದು ಇವತ್ತಿಗೂ ನೆನಪಿನಲ್ಲಿ ಇದೆ.

ನಲವತ್ತು ವರ್ಷಗಳು ಹೇಗೆ ಕಳೆದುಹೋದವು! ಕಾಲವೆಂದರೆ ಹಾಗೇ,
ಬಿಲ್ಲಿನಿಂದ ಬಿಟ್ಟ ಬಾಣದ ಹಾಗೆ..

"ನಾಯಕಾ.."

ಯಾರೋ ಕರೆಯುತ್ತಿರುವ ಹಾಗಿದೆ, ಹೋ ಗೋಪಾಲ!

"ಗೋಪಾಲ ಹೇಗಿದ್ದ್ಯೋ?"

"ಚೆನ್ನಾಗಿದ್ದೇನೆ. ಅದೇನು ಇತ್ತೀಚಿಗೆ ನೀನು ಕಾಣುವುದೇ ಇಲ್ಲ?"

"ಕೆಲವು ದಿನಗಳಿಂದ ಮೈ ಹುಷಾರಿರಲಿಲ್ಲ ನೋಡು"

"ಮಂಡಿ ನೋವು ಇರಬೇಕಲ್ಲ?"

"ಹುಂ. ಅದೇ."

"ಔಷಧಿ ತೆಗೆದುಕೊಂಡಿರಲಿಲ್ಲವೇ?"

"ಯಾವ ಔಷಧಿ ಮಾಡಲಿ ನೀನೇ ಹೇಳು. ಡಾಕ್ಟರ್ ಹೇಳುವ ಪ್ರಕಾರ ಮಂಡಿನೋವಿನಿಂದ ಮುಕ್ತಿ ಪಡೆಯಬೇಕಾದರೆ ನಾನು ಸತ್ತು ಹೋಗಬೇಕು. ಅದಿರಲಿ, ಎಲ್ಲಿಯೋ ಹೊರಟಿರುವ ಹಾಗಿದೆ?"

"ಹೀಗೇ ಗಾಳಿ ಸೇವನೆಗೆ. ನೀನೂ ವಾಕಿಂಗಿಗೆ ತಾನೇ"

"ಹೌದು"

"ಈ ರಸ್ತೆಯಲ್ಲಿರುವ ಟ್ರಾಫಿಕ್‌ನಲ್ಲಿ ಸಿಕ್ಕಿಕೊಂಡು ಎಂತಹ ವಾಕಿಂಗ್ ಹೇಳು?"

"ಅದು ಹೌದು."

ಮುಖ್ಯ ರಸ್ತೆಯ ಬಲಬದಿ ಹೊಲಗಳು. ಎಡಬದಿ ಉದ್ದ ಮತ್ತು ಅಗಲವಾದ ಹೊಳೆ. ಮಳೆಗಾಲದಲ್ಲಿ ಹೊಳೆಯಲ್ಲಿ ನೀರು ತುಂಬಿಕೊಂಡಿರುತ್ತದೆ. ಆದರೆ ಮಳೆಗಾಲ ಮುಗಿಯುವಷ್ಟರಲ್ಲಿ ನೀರು ಹಿಂಗಿಹೋಗಿ ಹೊಳೆ ಹೊಲದ ಹಾಗೆ ಕಂಡುಬರುವುದು. ಬೇಸಿಗೆ ದಿನಗಳಲ್ಲಿ ಅಲ್ಲಿ ಬೆಳೆಯುವ ಹುಲ್ಲುಗಳನ್ನು ಮೇಯಲು ಹಸುಗಳು ಬರುವುದಿದೆ.

ನಾನು ಮತ್ತು ಗೋಪಾಲ ಡಾಮರು ರಸ್ತೆ ಹಿಡಿದು ನಡೆಯತೊಡಗಿದೆವು. ರಸ್ತೆಯಲ್ಲಿ ಹೆಚ್ಚು ವಾಹನಗಳಿರಲಿಲ್ಲ. ಸ್ವಚ್ಛವಾಗಿ, ಅಗಲವಾಗಿರುವ ರಸ್ತೆ.

ಆದರೆ ಹೆಚ್ಚು ಜನಸಂಚಾರವಿಲ್ಲ. ಮಂದವಾಗಿ ಬೀಸುವ ಗಾಳಿ, ತಂಪಾಗಿರುವ ಬಿಸಿಲು. ಕಾಲ್ನಡಿಗೆಯಲ್ಲಿ ಸಾಗುವುದು ಖುಷಿಯೆನಿಸಿತು. ನಿಧಾನವಾಗಿ ಹೋದರೆ ಒಳ್ಳೆಯದು. ಇಲ್ಲದಿದ್ದರೆ ಮಂಡಿನೋವು ಅನುಭವಿಸಬೇಕಾದಿತು.

ಗೋಪಾಲನೊಂದಿಗೆ ಹರಟೆ ಹೊಡೆಯುತ್ತಾ ಮೆಲ್ಲನೆ ನಡೆದು ಹೋಗುತ್ತಿರಬೇಕಾದರೆ ತಲೆಯ ಮೇಲೆ ಏನೋ ಬಿದ್ದಂತಾಯಿತು. ಬಿದ್ದ ವಸ್ತುವನ್ನು ಜಾಡಿಸಿ ಒಗೆಯಲು ಕೈ ತನ್ನಿಂದ ತಾನೇ ಮೇಲೆ ಬಂತು. ಆದರೆ ಕೈಬೆರಳಿನ ಸ್ಪರ್ಶಕ್ಕೆ ಸಿಗುವ ಮೊದಲೇ ಆ ವಸ್ತು ತಲೆಯಿಂದ ಭುಜದ ಮೇಲೆ, ಅಲ್ಲಿಂದ ಪಾದದ ಬಳಿ ಬಂದು ಬಿತ್ತು. ಒಂದು ಹೂ. ಕೆಂಪು ಬಣ್ಣದ ಹೂ. ತಲೆಯೆತ್ತಿ ನೋಡಿದರೆ ಇಡೀ ಮರವೇ ಅರಳಿ ನಿಂತಿದೆ. ಸುತ್ತಮುತ್ತ ಎಲ್ಲ ಕಡೆಗಳಲ್ಲಿ ನಳನಳಿಸುವ ಹೂಗಳ ತೇರು.

ಹಿಂದೆ ತಿರುಗಿ ನೋಡಿದ ಗೋಪಾಲ ನಾನು ಮರವನ್ನು ದಿಟ್ಟಿಸಿ ನೋಡುತ್ತಿರುವುದನ್ನು ಗಮನಿಸಿ ಹೇಳಿದ,

"ವಸಂತ ಋತು ಬಂದಿದೆ. ನಿನಗೆ ಗೊತ್ತಾಗಲಿಲ್ಲವೇನು?"

ಕೋಗಿಲೆಯ ಧ್ವನಿ ಕೇಳುತ್ತಿದ್ದೆ. ಆದರೆ ಮನಸ್ಸಿನಲ್ಲಿದ್ದ ವಿಚಾರದಿಂದ ಅದರತ್ತ ಗಮನವನ್ನು ಹರಿಸಿರಲಿಲ್ಲ. ಬಾಲ್ಯದಲ್ಲಿ ಕೋಗಿಲೆಯ ಕೂ.. ಕೇಳಿದರೆ ಪ್ರತಿಧ್ವನಿ ನೀಡುತ್ತಿದ್ದೆ. ಆಗ ಸೂಚನೆ ನೀಡಿದಂತೆ ಕೋಗಿಲೆಯ ಧ್ವನಿ ಹೆಚ್ಚು ಹೆಚ್ಚು ಏರುತ್ತಾ ಹೋಗುತ್ತಿತ್ತು. ಆಮೇಲೆ ಸ್ವಲ್ಪ ಹೊತ್ತಿನಲ್ಲಿ ಸಾಕಾಗಿ ಹೋದಂತೆ ಆ ಧ್ವನಿ ನಿಂತು ಹೋಗುತ್ತಿತ್ತು. ನಾನು ಗೆದ್ದೆ ಎಂಬ ಭಾವನೆಯಿಂದ ಖುಷಿಪಡುತ್ತಿದ್ದೆ...ಬಾಲ್ಯಕಾಲದ ಕ್ಷಣಗಳು!

ಗೋಪಾಲನ ಜೊತೆಯಲ್ಲಿ ಸುಮಾರು ಒಂದು ಕಿಲೋಮೀಟರ್ ನಡೆದಿರಬೇಕು. ಮುಂದೆ ಒಂದು ಸಣ್ಣ ಜಂಕ್ಷನ್ ಸಿಕ್ಕಿತು. ರಸ್ತೆ ಎಡ ಮತ್ತು ಬಲಭಾಗಗಳಲ್ಲಿ ಕವಲೊಡೆದು ಮುಖ್ಯ ರಸ್ತೆ ಮಾತ್ರ ನೇರವಾಗಿ ಸಾಗಿತ್ತು. ನನಗಿಂತ ಮುಂದೆ ಇದ್ದ ಗೋಪಾಲ ಬಲಬದಿ ಹೊರಳಿದ. ನಾನು ಮುಂದೆ ಹೋಗುವುದೋ ಅಥವಾ ಹಿಂದೆ ತಿರುಗುವುದೋ ಎಂಬ ಗೊಂದಲದಲ್ಲಿ ನಡಿಗೆಯ ವೇಗ ಕಡಿಮೆ ಮಾಡಿದೆ.

"ಗೋಪಾಲ!"

ಗೋಪಾಲ ತಿರುಗಿ ನೋಡಿದ.

"ಎಲ್ಲಿ ಹೋಗ್ತಾ ಇದ್ದಿಯಾ?"

ಅವನು ಬಲಬದಿಯಲ್ಲಿದ್ದ ಬೆಟ್ಟಕ್ಕೆ ಕೈ ತೋರಿಸಿದ, "ಬಾ, ಹೋಗೋಣ"

ನನ್ನಲ್ಲಿದ್ದ ಗೊಂದಲ ಹೆದರಿಕೆಯಾಗಿ ಪರಿವರ್ತನೆ ಹೊಂದಿತು.

"ಅಯ್ಯೋ ಬೇಡ, ಬೇಡ. ನಾನು ಬರಲಾರೆ. ನನ್ನಿಂದ ಮೇಲೆ ಹತ್ತುವುದು ಸಾಧ್ಯವಿಲ್ಲ. ನೀನು ಹೋಗು. ನಾನು ಹಿಂದೆ ಹೋಗ್ತೇನೆ"

ಗೋಪಾಲ ನಕ್ಕ. "ಯಾಕೆ ಮೇಲೆ ಹತ್ತಲು ನಿನಗೆ ಕಾಲಿಲ್ಲವೇ?"

"ಹಾಗಲ್ಲ ಮಹಾರಾಯ. ಆಮೇಲೆ ಇಡೀ ರಾತ್ರಿ ಕಾಲು ನೋಯುತ್ತೆ."

"ಮೆಲ್ಲ ಹತ್ತಿ ಹೋದರಾಯಿತು. ಹಿಂದೆ ನಾವು ಹೋಗುತ್ತಿದ್ದೆವಲ್ಲ?"

"ಹಿಂದಿನ ಹಾಗೆ ನಾವು ಮಕ್ಕಳು ಅಲ್ವಲ್ಲಾ?"

ಹಿಂದೆ ವ್ಯಾಯಾಮದ ನೆವದಲ್ಲಿ ಬೆಳಿಗ್ಗಿನ ಹೊತ್ತು ಈ ಬೆಟ್ಟದ ಮೇಲೆ ನಾಲ್ಕಾರು ಬಾರಿ ಹತ್ತುವುದು ಇಳಿಯುವುದು ಮಾಡುವುದಿತ್ತು. ಮುನ್ನೂರು ಅಡಿ ಎತ್ತರದ ಶಿಲಾಬೆಟ್ಟ. ಸಣ್ಣಂದಿನಲ್ಲಿ ಇನ್ನೂರು ಮುನ್ನೂರು ಮೆಟ್ಟಲು ಹತ್ತಿ ಮೇಲೆ ಗೊಮ್ಮಟೇಶ್ವರನ ಮುಂದೆ ನಿಂತಾಗ ಯಾವ ಆಯಾಸವೂ ಆಗುತ್ತಿರಲಿಲ್ಲ. ಆದರೆ ಮತ್ತೆ ಮತ್ತೆ ಹತ್ತಿ ಇಳಿಯುವುದು ಮಾಡುವಾಗ ಮಾತ್ರ ತುಸು ತ್ರಾಸವಾಗುತ್ತಿತ್ತು. ಆದರೆ ಅದು ಅಷ್ಟೇ ಖುಷಿಯನ್ನೂ ನೀಡುತ್ತಿತ್ತು. ಬೆಳಿಗ್ಗೆ ವ್ಯಾಯಾಮವೆಂದು, ಸಂಜೆ ಪರಿಶುದ್ಧ ಗಾಳಿಸೇವನೆಗೆಂದು ಬರುವುದಿತ್ತು. ಆ ರೂಢಿ ತಪ್ಪಿ ನಾಲ್ಕೈದು ವರ್ಷ ಕಳೆದಿವೆ..

ಆದರೆ ಈಗ ನೋಡಿದರೆ ನಾನು ಆಯಾಸವಿಲ್ಲದೆ ಬೆಟ್ಟದ ಮೆಟ್ಟಲು ಹತ್ತಿ ಮೇಲೆ ಹೋಗಲು ಪ್ರಾರಂಭಿಸಿದ್ದೇನೆ! ಸಾಧ್ಯವಿಲ್ಲ ಎಂದುಕೊಂಡಿದ್ದೆ. ನೋಡೋಣ ಎಷ್ಟು ಸಾಧ್ಯವಿದೆಯೋ ಅಷ್ಟು ಹತ್ತುವುದು. ಅದರಲ್ಲಿ ಒತ್ತಾಯ ಇಲ್ಲವಲ್ಲ. ಕಾಲಿನ ಮೇಲೆ ಒತ್ತಡ ಬೀಳುವುದು ಅನುಭವಕ್ಕೆ ಬಂದರೆ ಹಿಂದೆ ಹೋದರಾಯಿತು.

ಎಲ್ಲಾ ಮೆಟ್ಟಲುಗಳನ್ನು ಹತ್ತಿ ಮೇಲೆ ತಲುಪಿದ ನಂತರ ಆಯಾಸವೆನಿಸಿತು. ಕಾಲು ನೋವು ಕೂಡಾ ಅನುಭವಕ್ಕೆ ಬರತೊಡಗಿತು.

"ಗೋಪಾಲ! ನಿಲ್ಲು"

"ಯಾಕೆ ಸುಸ್ತಾಯಿತಾ?"

"ಇಲ್ಲಿಯೇ ಎಲ್ಲಾದರೂ ಕುಳಿತುಕೊಳ್ಳೋಣ"

"ಹಾಗಿದ್ದರೆ ಬಾ ಇಲ್ಲಿ" ನೆಲದ ಮೇಲೆ ಅಡ್ಡ ಮಲಗಿಸಿದ್ದ ಎರಡು ಶಿಲಾಕಂಭಗಳಿಗೆ ಬೆರಳು ತೋರಿಸಿ ಗೋಪಾಲ ಕರೆದ.

ನಾನು ನಿಧಾನವಾಗಿ ಹೋಗಿ ಕುಳಿತುಕೊಂಡೆ. ಸುತ್ತಮುತ್ತ ಮಕ್ಕಳು ಆಟವಾಡುತ್ತಿದ್ದಾರೆ. ಕೆಲವು ಯುವಕರು ಮೆಟ್ಟಲು ಇಲ್ಲದ ಕಡೆಯಿಂದ ಬೆಟ್ಟ ಇಳಿಯುವ ಸಾಹಸ ಮಾಡುತ್ತಿದ್ದಾರೆ. ಗಂಡು-ಹೆಣ್ಣಿನ ಜೋಡಿ ಅಲ್ಲಲ್ಲಿ ಕುಳಿತು ಮಾತನಾಡಿಕೊಳ್ಳುತ್ತಿದ್ದಾರೆ. ಗೊಮ್ಮಟೇಶ್ವರನ ದರ್ಶನ ಮುಗಿಸಿ ಹೊರಬರುವ ಪ್ರವಾಸಿಗರ ಮುಖದಲ್ಲಿ ನಸುನಗೆ ಕಾಣಿಸುತ್ತಿದೆ. ಆದರೆ ಗೊಮ್ಮಟೇಶ್ವರ ಮಾತ್ರ ಅನಾಸಕ್ತನಂತೆ ಕಂಡುಬರುತ್ತಿದ್ದಾನೆ. ಅವನ ಶಾಂತ, ಸುಂದರ ಮುಖದ ಮೇಲೆ ಗಾಂಭಿರ್ಯವಿದೆ. ಆದರೆ ಅವನು ತುಟಿಯಲ್ಲಿ ನಗುವ ಪ್ರಯತ್ನವನ್ನು ನಡೆಸಿದಂತೆ ಕಾಣುತ್ತಿದೆ.

ನಾನು ಕುಳಿತಲ್ಲಿಂದ ಗೊಮ್ಮಟೇಶ್ವರನ ಇಡೀ ಮೂರ್ತಿ ಕಾಣುತ್ತಿತ್ತು. ಆದರೆ ಹಲವು ಬಾರಿ ಹತ್ತಿಳಿದುದರಿಂದಲೇ ಕಂಡಿದ್ದರಿಂದ ಕಣ್ಣುಮುಚ್ಚಿದರೂ ನೆಟ್ಟಗೆ ನಿಂತಿರುವ ಅವನ ಭಂಗಿ ನಿಚ್ಚಳವಾಗಿ ಕಾಣುವುದು ಸಾಧ್ಯವಿತ್ತು. ಕೈಕಾಲು ನೇರವಾಗಿಟ್ಟುಕೊಂಡು ತಲೆಯನ್ನು ಬಗ್ಗಿಸದೆ ಅರ್ಥಭರಿತ ನೋಟವನ್ನು ಬೀರುತ್ತಿರುವ ಮೂರ್ತಿ. ಐದು ಶತಮಾನಗಳು ಕಳೆದಿವೆ. ನಲ್ವತ್ತೆರಡು ಅಡಿಗಳಷ್ಟು ಉದ್ದವಿರುವ ಈ ಶಿಲಾಮೂರ್ತಿ ಮಳೆಯ ನೀರು, ಬಿಸಿಲಿನ ಶಾಖ, ಚಳಿಯ ಗಾಳಿ ಮತ್ತು ಮುಗಿಲಿಂದ ಬಂದೆರಗುವ ಮಿಂಚು-ಯಾವುದಕ್ಕೂ ಇನಿತೂ ಲಕ್ಷ್ಯ ನೀಡದೆ ಕಾಲಕ್ಕೆ ಮುಖ ಮಾಡಿ ನಿಂತಿದೆ. ಗೋಮಟೇಶ್ವರನ ತಪಸ್ಸು ಎಷ್ಟು ದೀರ್ಘ ಸಮಯದವರೆಗೆ ಮುಂದುವರಿ

ಬಿತೆಂದರೆ ಸುತ್ತಲೂ ಗೆದ್ದಲಿನ ಹುತ್ತ ಬೆಳೆಯಿತು. ಗಿಡಗಳು ಬೆಳೆದವು. ಬಳ್ಳಿಗಳು ಅವನ ಕಾಲಿನ ಮೇಲಿಂದ ತೊಡೆಯನ್ನು ಬಳಸಿ ಭುಜದತ್ತ ಹಾಗಿದವು.

ಈಗ ನನಗೆ ಕುಳಿತಲ್ಲಿಂದ ಗೊಮ್ಮಟೇಶ್ವರನ ಮುಖ, ಕುತ್ತಿಗೆ ಮತ್ತು ಭುಜಗಳು ಕಾಣಿಸಿದವು. ಹಿಂದೆ ಇರುವ ಬೆಟ್ಟದಿಂದ ಸೂರ್ಯ ಕೆಳಗಿಳಿಯು ತ್ತಿದ್ದುದರಿಂದ ಅಸ್ತಮಾನದ ಬೆಳಕು ಮೂರ್ತಿಯ ಮುಖದ ಮೇಲೆ ಬೀಳದೆ, ಅದರ ಹಿಂದಿನಿಂದ ಕಾಣಿಸುತ್ತಿತ್ತು. ಇನ್ನೂ ಕತ್ತಲೆ ಆವರಿಸಿರಲಿಲ್ಲ.

ಯಾಕ್ಹೋ ಮತ್ತೆ ಆ ವಿಚಾರವೆದ್ದು ಕಾಡತೊಡಗಿತು. ಕೇವಲ ಮೂರು ದಿನಗಳು ಮಾತ್ರ ಉಳಿದಿವೆ. ಮನಸ್ಸು ಅಸ್ವಸ್ಥವಾಯಿತು. ಸಣ್ಣ ಕಲ್ಲೊಂದನ್ನು ನೀರಿಗೆ ಬೀಸಿ ಒಗೆದಾಗ ಪುಟ್ಟಪುಟ್ಟ ಅಲೆಗಳು ಕಾಣಿಸಿದಂತೆ, ಮನಸ್ಸಿನಲ್ಲಿದ್ದ ವಿಚಾರ ವಿಸ್ತಾರ ಪಡೆಯುತ್ತಾ ಅಲೆಯಾಗಿ ಮಾರ್ಪಟ್ಟು ಒಂದರ ಹಿಂದೆ ಇನ್ನೊಂದರಂತೆ ಎಲ್ಲಾ ಕಡೆ ಹರಡಲಾರಂಭಿಸಿತು.

"ಯಾಕೆ ಸುಮ್ಮನಾಗಿಬಿಟ್ಟೆ, ಸಾಕಾಯಿತೆ?" ಗೋಪಾಲ ಪ್ರಶ್ನಿಸಿದ.

"ಇಲ್ಲಿ ಬಂದು ಮುಟ್ಟುವುದು ಸಾಧ್ಯವಿಲ್ಲವೆಂದುಕೊಂಡಿದ್ದೆ. ಆದರೆ ಮುಟ್ಟಿದ್ದು ಆಶ್ಚರ್ಯವನ್ನುಂಟು ಮಾಡಿದೆ"

"ಹುಂ. ಆದರೆ ಏನೋ ಚಿಂತೆ ಹಚ್ಚಿಕೊಂಡಿರುವ ಹಾಗಿದೆ"

"ಹುಂ. ಇನ್ನು ಮೂರು ದಿನಗಳು ಉಳಿದಿವೆ ಎಂದು ಯೋಚಿಸುತ್ತಿದ್ದೆ."

"ಮೂರು ದಿನಗಳೇ?" ಗೋಪಾಲನ ಮುಖದಲ್ಲಿ ನಸುನಗೆ ಮೂಡಿತು. "ನಿನ್ನ ರಿಟೈರ್‌ಮೆಂಟ್! ಹಾಗಾದರೆ ನಿನ್ನ ಅಸ್ವಸ್ಥತೆಗೆ ಇದಾ ಕಾರಣ?"

"ಅದು ಸಹಜ ತಾನೇ"

"ಖಂಡಿತವಾಗಿಯೂ. ಕಂಪನಿಯ ಆಡಳಿತ ತನ್ನ ಕೆಲಸಗಾರರಲ್ಲಿ ಸೆನ್ಸ್‌ಆಫ್ ಬಿಲಾಂಗಿಂಗ್‌ನ ಮಂತ್ರವನ್ನು ಎಷ್ಟು ಆಳವಾಗಿ ತೂರಿ ಬಿಡುವುದೆಂದರೆ, ಎಷ್ಟೋ ಕೆಲಸಗಾರರು ಈ ಮಂತ್ರವನ್ನು ತಮ್ಮ ಜೀವನ ಕೇಂದ್ರವಾಗಿ ಕಾಣುತ್ತಾರೆ. ನಿಜವಾಗಿಯೂ ಹೇಳುವುದಾದರೆ, ಈ ಸೆನ್ಸ್

ಆಫ್ ಬಿಲಾಂಗಿಂಗ್ ಪ್ರಜ್ಞೆ ಇದೆಯಲ್ಲ ಅದು ಶುದ್ಧ ನಾನಸೆನ್ಸ್. ಅದೊಂದ
ವಿರೋಧಾಭಾಸ. ತಾನು ಇಂತಹ ಕಂಪನಿಗೆ ಸೇರಿದವನು ಎಂದು ಕೆಲಸ
ಮಾಡುವವನಿಗೆ ಅನಿಸುತ್ತದೆ. ಕಂಪನಿಯನ್ನು ಬಿಟ್ಟರೆ ತನ್ನ ಬದುಕಿ
ಅರ್ಥವಿಲ್ಲವೆಂದು ಅವನಿಗೆ ಕಾಣುತ್ತದೆ. ಇದಕ್ಕೆ ಕಾರಣವೇನೆಂದರೆ ಅವ
ಹೊಟ್ಟೆ ತುಂಬುವುದು ಈ ನೌಕರಿಯಿಂದ. ಇಷ್ಟೇ ಅಲ್ಲ ಕೆಲಸಗಾರರು ತಮ
ಅಸ್ಮಿತೆಯನ್ನು ಕಂಪನಿಯ ಹೆಸರಿನೊಂದಿಗೆ ಜೋಡಿಸಿಕೊಂಡು ತಮ್ಮನ್ನು
ಅದಕ್ಕೆ ಸಮರ್ಪಿಸಿಕೊಂಡಿರುತ್ತಾರೆ. ಹಾಗಿದ್ದರೆ ಇಲ್ಲಿ ವಿರೋಧಾಭಾಸ
ಆಗುವುದು ಹೇಗೆ? ನಿನಗೆ ಸೆನ್ಸ್ ಆಫ್ ಬಿಲಾಂಗಿಂಗ್ ನೀಡಿರುವ ಕಂಪೆನಿಯು
ನಿನಗೆ ಸೆನ್ಸ್ ಆಫ್ ವಾಯಡ್‌ನೆಸ್ ನೀಡುತ್ತದೆ ಅಂತ ಅಲ್ಲ. ಕಂಪನಿಗೆ
ನೀನು ಬೇಕೇಬೇಕು ಎಂದೇನಿಲ್ಲ. ನಿನಗೆ ಸೂಪರ್ ಆನುವೇಶನಿನ ನೋಟೀಸ್
ಬರುತ್ತದೆ ನೋಡು, ಆಗ ಈ ವಿರೋಧಾಭಾಸ ನಿನಗೆ ತಿಳಿಯುತ್ತದೆ, ಹೌದು
ತಾನೇ?"

"ನಾನು ಬುದ್ಧಿವಂತನಲ್ಲ. ನನಗೆ ಹೀಗೆಲ್ಲಾ ಆಲೋಚನೆ ಬರಲೇ
ಇಲ್ಲ."

"ಹಾಗಿದ್ದರೆ ನಿನಗೆ ಏನು ಅನಿಸುತ್ತದೆ?"

"ಗೊತ್ತಿಲ್ಲ. ಕೈಯಿಂದ ಏನೊ ಜಾರಿ ಹೋಗುತ್ತಿರುವ
ಹಾಗೆ..ವಯಸ್ಸಾಗಿರುವುದರಿಂದ ಯಾರಿಗೂ ಬೇಡವಾದ ಹಾಗೆ..."

"ಗ್ರೊ ಓಲ್ಡ್ ಅಲಾಂಗ್ ವಿದ್ ಮಿ!" ಎಂದು ಹೇಳುತ್ತಾ ಗೋಪಾಲ
ಗಹಗಹಿಸಿ ನಗತೊಡಗಿದ. ಹತ್ತಿರವೇ ಆಟವಾಡುತ್ತಿದ್ದ ಮಕ್ಕಳು ಸ್ತಬ್ಧರಾದರು.
ಸುತ್ತಲೂ ನಡೆದಾಡುತ್ತಿದ್ದ ಜನರು ಆಶ್ಚರ್ಯದಿಂದ ಗೋಪಾಲನನ್ನು
ನೋಡಲಾರಂಭಿಸಿದರು. ಆದರೆ ಗೋಪಾಲನಿಗೆ ಅವರತ್ತ ಲಕ್ಷ್ಯವಿರಲಿಲ್ಲ.
ಅವನು ಕೇಳಿದ,

"ನೀನು ರಾಬರ್ಟ್ ಬ್ರೌನಿಂಗ್ ಎಂಬ ವಿಶೇಷ ವ್ಯಕ್ತಿಯ ಹೆಸರು
ಕೇಳಿದ್ದಿಯಾ?"

ನಾನು ನೆನಪು ಮಾಡಿಕೊಂಡೆ. ಹೌದು, ಶಾಲೆಯಲ್ಲಿ ಕಲಿಯುವಾಗ ನಮಗೆ ಅವನ ಒಂದು ಕವಿತೆ ಪಠ್ಯವಾಗಿತ್ತು. ಆ ಕವಿತೆಯ ಎರಡು ಸಾಲುಗಳು ನೆನಪಾಗುತ್ತಿವೆ: God's in his heaven, All's right with the World!

"ಹೌದು, ಕೇಳಿದ್ದೇನೆ."

"ಒಳ್ಳೇಯದಾಯ್ತು. ಬ್ರೌನಿಂಗನ ಒಂದು ಕವಿತೆ ಹೀಗಿದೆ: ರಬೀ ಬೆನ್ ಎಜರಾ. ಒಂದು ರಬೀ ಅಂದರೆ ಜ್ಯುದೇವನ ಧರ್ಮಯುದ್ಧ. ಅವನು ಹೇಳುತ್ತಾನೆ.." ಗೋಪಾಲ ನಾಟಕೀಯವಾಗಿ ಹಾವಭಾವ ಪ್ರದರ್ಶಿಸುತ್ತಾ ಹೇಳತೊಡಗಿದ,

*Grow old along with me!*

*The best is yet to be,*

*The last of life, for which the first was made;*

*Our times are in his hand*

*Who saith "A Whole I Planned,*

*Youth shows but half; trust God:see all nor be afraid!"*

ಸುತ್ತುಮುತ್ತಲಿನ ಜನರು ಗೋಪಾಲನನ್ನು ವಿಸ್ಮಯದ ದೃಷ್ಟಿಯಿಂದ ನೋಡುತ್ತಾ ಅವನ 'ಕವಿತಾ ವಾಚನ'ವನ್ನು ಕಿವಿಗೊಟ್ಟು ಕೇಳುತ್ತಿದ್ದರು. ಆದರೆ ಅವನಿಗೆ ಅವರತ್ತ ಸ್ವಲ್ಪವೂ ಗಮನವಿರಲಿಲ್ಲ. ಅವನು ನನ್ನನ್ನು ಉದ್ದೇಶಿಸಿ ಕೇಳಿದ,

"ಅರ್ಥ ಆಯ್ತಾ?"

ನಾನು ತಲೆಯಲ್ಲಾಡಿಸಿ 'ಹೌದೆಂದು' ಹೇಳಿದೆ. ಆದರೆ ಮನಸ್ಸಿನಲ್ಲಿರುವ ಅಸ್ವಸ್ಥತೆ ಮಾತ್ರ ಸ್ವಲ್ಪವೂ ಕಡಿಮೆಯಾಗಿರಲಿಲ್ಲ.

"ಗೋಪಾಲ, ಮಾತಿನಿಂದ ಸುಖ, ಶಾಂತಿ ಮತ್ತು ಸಮಾಧಾನ ಸಿಗುವು ದಾದರೆ ಎಷ್ಟು ಚೆನ್ನಾಗಿತ್ತು! ಈ ಶತಮಾನದಲ್ಲಿ ಯಾವುದೇ ಸಮಸ್ಯೆ ಇರುತ್ತಿರಲಿಲ್ಲ."

ಗೋಪಾಲ ಗಂಭೀರನಾದ. ಮಾತು ಪ್ರಾರಂಭಿಸುವ ಮೊದಲು ಗೂಢವಾಗಿ ನಗುತ್ತಾ ಕೆಳಧ್ವನಿಯಿಂದ ಹೇಳತೊಡಗಿದ.

"ಬ್ರೌನಿಂಗನು ಬದುಕಿನ ಕೊನೆ ಮತ್ತು ಮೊದಲು ಹೇಳಿದ್ದಾನೆ. ಮೊದಲಿನ ಕತೆ ನಾನು ಹೇಳುತ್ತೇನೆ ಕೇಳು. ಇದು ನಮ್ಮ ಮನೆಯಲ್ಲಿಯೇ ನಡೆದದ್ದು. ನಾನು ಮೂರು ದಿನಗಳ ಹಿಂದೆ ಎಂದಿನಂತೆ ನನ್ನ ಮೊಮ್ಮಗಳೊಂದಿಗೆ ಚೆಸ್ ಆಡುತ್ತಿದ್ದೆ. ಇದ್ದಕ್ಕಿದ್ದಂತೆ ಅವಳು ಎದ್ದು ನಿಂತು ಹಿಂಭಾಗದ ತನ್ನ ಬಟ್ಟೆಯನ್ನು ಸವರಿಕೊಂಡಳು. ಅವಳ ಬೆರಳಿಗೆ ರಕ್ತ ಅಂಟಿಕೊಂಡಿತು. ಅದನ್ನು ಮೊದಲು ನೋಡಿದ್ದು ನಾನು. ನಂತರ ಅವಳು ನೋಡಿದಳು. ಅವಳ ಮುಖದಲ್ಲಿ ಆಶ್ಚರ್ಯ, ಕಸಿವಿಸಿ ಮತ್ತು ಹೆದರಿಕೆ ಕಾಣಿಸಿತು. ಅವಳು ತಕ್ಷಣ ಎದ್ದು ವೇಗವಾಗಿ ಒಳಕೋಣೆಯನ್ನು ಪ್ರವೇಶಿಸಿದಳು. ಮರಳಿ ಬಂದಾಗ ಅವಳ ಮುಖದಲ್ಲಿ ಹೆದರಿಕೆ ಇರಲಿಲ್ಲ. ಆದರೆ ಕಸಿವಿಸಿ ಕಡಿಮೆಯಾಗಿರಲಿಲ್ಲ. ನಂತರ ಅವಳು ಎಂದಿನಂತೆ ನನ್ನೊಂದಿಗೆ ಬಿಚ್ಚುಮನಸ್ಸಿನಿಂದ ಮಾತನಾಡತೊಡಗಿದಳು. ಆದರೆ ಒಂದು ವೇಳೆ ಅವಳು ವಿಚಾರಿಸಿದ್ದಲ್ಲಿ, ಅವಳಲ್ಲಿ ಯಾವ ಬದಲಾವಣೆ ಆಗಿದೆ ಮತ್ತು ಯಾತಕ್ಕಾಗಿ ಆಗಿದೆ ಎಂಬುದನ್ನು ತಿಳಿಹೇಳಲು ನಾನು ತಯಾರಿದ್ದೆ. ಆದರೆ ಏನಾಯಿತು ಗೊತ್ತಾ? ಅವಳು ಆ ದಿನದ ಚೆಸ್ ಆಟವನ್ನು ಅರ್ಧದಲ್ಲಿಯೇ ಬಿಟ್ಟುಕೊಟ್ಟಿದ್ದಳು. ಈಗ ನಮ್ಮ ನಡುವೆ ಒಂದು ಹೊಸ ಧಾತು ಕಾಣಿಸಿಕೊಂಡಿದೆ. ಅದು ಲಜ್ಜೆ. ತಾನು ಹಿಂದಿನಂತೆ ಹುಡುಗಿಯಾಗಿ ಉಳಿದಿಲ್ಲವೆಂಬುದು ಅವಳನ್ನು ಕಾಡುತ್ತಿರಬೇಕು. ನನ್ನ ಹೆಂಡತಿ ಅಥವಾ ನನ್ನ ಸೊಸೆ ಅವಳಿಗೆ ಹೊಸ ವಿಚಾರವನ್ನು ತಿಳಿಸಿರಬೇಕು. ಆದರೆ ಒಂದಂತೂ ಸ್ಪಷ್ಟವಾಯಿತು. ನನ್ನ ಮುಂದೆ ಕುಳಿತು ಆಟವಾಡುತ್ತಿದ್ದ ಈ ಮಗು ಒಳಗೆ ಹೋಗಿ ಬರುವಷ್ಟರಲ್ಲಿ ಮಗುವಾಗಿ ಉಳಿದಿರಲಿಲ್ಲ. ಒಳಗೆ ಹೋಗಿ ಬರುವುದರ ನಡುವಿನ ಆಘಾತದ ಕ್ಷಣಗಳ ಅಂತರವು ಹತ್ತು ಹದಿನೈದು ನಿಮಿಷಗಳಿರಬಹುದು, ಅಷ್ಟೇ. ಆ ಹತ್ತು ಹದಿನೈದು ನಿಮಿಷಗಳಲ್ಲಿ ಅವಳ ಆಕಾರ ಬದಲಾಗಲಿಲ್ಲ. ಅವಳ ರೂಪ ಬದಲಾಗಲಿಲ್ಲ. ಹದಿನೈದು ನಿಮಿಷಗಳಲ್ಲಿ ವಯಸ್ಸು ಬೆಳೆಯಿತು. ಆದರೆ ಎಷ್ಟು ದೊಡ್ಡ ಬದಲಾವಣೆ! ಹಾವು ಪೊರೆ ಬಿಚ್ಚಿಕೊಂಡಂತೆ ಅವಳು ಬಾಲ್ಯತನದ

ುಖವನ್ನು ಕಳಚಿ ಹೆಂಗಸಿನ ಮುಖವನ್ನು ತೋರಿಸುತ್ತಿರುವಂತೆ ಕಂಡಿತು. ಗ ಮತ್ತೆ ಆಲೋಚಿಸುವಾಗ ನನಗೇ ಗೊಂದಲವಾಗುತ್ತದೆ– ಆ ಹೊತ್ತಿನಲ್ಲಿ ನ್ನ ಮೊಮ್ಮಗಳು ಬಾಲ್ಯದ ಮುಖವಾಡ ಧರಿಸಿದ ಹೆಂಗಸಾಗಿದ್ದಳೇ ಅಥವಾ ಂಗಸಿನ ಮುಖವಾಡ ಧರಿಸಿದ ಹುಡುಗಿ? ಅದೇನೂ ಮುಖ್ಯವಲ್ಲ. ನನ್ನ ಯಿಂಟ್ ಏನೆಂದರೆ, ಒಬ್ಬ ಹುಡುಗಿಗೆ ಹೆಂಗಸಾಗಲು ವರ್ಷಗಳ ಅನುಭವ ೇಕಿಲ್ಲ. ಕೆಲವೇ ಕ್ಷಣಗಳ ಅನುಭವವೇ ಸಾಕು. ವಯಸ್ಸಿನಿಂದ ವಯಸ್ಸು ಳೆಯುತ್ತದೆ. ಅನುಭವದಿಂದ ಬೆಳವಣಿಗೆ ಬರುತ್ತದೆ.”

ಗೋಪಾಲ ಯಾರೊಡನೆ ಮಾತನಾಡುತ್ತಿದ್ದಾನೆ ಎನ್ನುವುದು ಳಿಯಲಿಲ್ಲ. ನನ್ನ ಜೊತೆ ಮಾತನಾಡುತ್ತಿದ್ದನೋ ಅಥವಾ ತನ್ನೊಂದಿಗೇ ಾತನಾಡುತ್ತಿದ್ದಾನೋ? ಗಂಡಸು ಮುದಕನಾದಾಗ ಮತ್ತು ಹುಡುಗಿ ಪ್ರಾಯಕ್ಕೆ ಂದಾಗ ಕಸಿಪಿಸಿಗೊಳ್ಳುವುದು ಸಹಜ ಎಂಬುದನ್ನು ಹೇಳುವುದು ಅವನಿಗೆ ೇಕಿತ್ತು ಎಂದು ಕಾಣಿಸುತ್ತದೆ. ಆ ಕಸಿವಿಸಿ, ಅಶಾಂತಿ, ಇವೆಲ್ಲವೂ ಡೆಯುವುದೇ ಎಂದು ಹೇಳಿ ನನಗೆ ಸಾಂತ್ವನ ಪಡಿಸಲು ಅವನು ಯತ್ನಿಸುತ್ತಿರುವುದಾದರೆ ಅವನು ತಪ್ಪಿದ್ದಾನೆ....ನನ್ನ ಮನಸ್ಸು ಮೊದಲಿನ ಾಗೆ ಅಶಾಂತವಾಗಿಯೇ ಉಳಿಯಿತು.

ಹವೆ ಸ್ವಲ್ಪ ತಣ್ಣಗಾಯಿತು. ಬೆಟ್ಟದ ಮೇಲೆ ಕತ್ತಲೆ ಇಳಿದಿತ್ತು. ಆಗಸದಲ್ಲಿ ಚ್ಚು ಬೆಳಕಿರಲಿಲ್ಲ. ಗೊಮ್ಮಟೇಶ್ವರನ ಮುಖ ಕಾಣಿಸುತ್ತಿರಲಿಲ್ಲ. ಎಲ್ಲಿಂದಲೋ ೂಪಿನ ಸುವಾಸನೆ ತೇಲಿ ಬಂತು. ಆಗಸದಲ್ಲಿ ಏಳೆಂಟು ಹಕ್ಕಿಗಳು ತಮ್ಮ ೂಡಿನತ್ತ ಹಾರಾಡುತ್ತಿದ್ದವು.

ದೂರದಿಂದ ಕೇಳಿಬರುತ್ತಿರುವ ಶಹನಾಯಿಯ ಸುಮಧುರ ಧ್ವನಿಯಂತೆ ುತ್ತೆ ಅದೇ ಯೋಚನೆ ಬರತೊಡಗಿತು–

– ಇನ್ನು ಮೂರು ದಿನ....



# ಕುಂಕುಮ

ಮೊಣಕಾಲು ಮತ್ತು ಹಿಮ್ಮಡಿಯಲ್ಲಿ ನೋವು ಪ್ರಾರಂಭವಾಗುವವರೆಗ
ಸಮಯ ಕಳೆದದ್ದು ಗೊತ್ತಾಗಲೇ ಇಲ್ಲ. ಗಂಟೆ ಎರಡೂಕಾಲು! ಬಂದು
ಮುಟ್ಟಿದ್ದು ಹನ್ನೊಂದು ಗಂಟೆಗೆ. ಈಗ ಆಗಿರುವುದು ಎರಡೂಕಾಲು ಗಂಟೆ
ಅಂದರೆ ಪುಸ್ತಕ ನೋಡುತ್ತಾ, ಹುಡುಕುತ್ತಾ ಮೂರು ಗಂಟೆ ಕಳೆದಿದೆ
ಪುಸ್ತಕದಂಗಡಿಗೆ ಹೋದರೆ ಇದೇ ನಡೆಯೋದು. ನನ್ನಷ್ಟಕ್ಕೆ ನಗುತ್ತಾ
ಅಂದುಕೊಂಡೆ, ಸಾಕು, ಇನ್ನು ಹೋಗುವಾ..

ಹೆಕ್ಕಿ ತೆಗೆದ ಪುಸ್ತಕಗಳನ್ನು ಹಿಡಿದು ಕ್ಯಾಶ್ ಕೌಂಟರಿನ ಮೇಲೆ
ಇಡುವಾಗ ಕಾಶಿಯರ್ ಕಡೆಗೆ ಗಮನ ಹೋಯಿತು.

"ಅರೆ! ನೀನು!"

"ಆಂ! ನಾನೇ"

ಶಾಲೆಯಲ್ಲಿ ನನ್ನ ಕ್ಲಾಸ್‌ಮೇಟ್ ಆಗಿದ್ದವನು. ಇಲ್ಲಿ ಯಾವಾಗಿಂದ
ಕ್ಯಾಶಿಯರ್ ಆಗಿದ್ದಾನೆ?

"ನೀನು ಇಲ್ಲಿ ಯಾವಾಗಿಂದ ಕೆಲಸ ಮಾಡ್ತಿದ್ದಿಯೋ?"

"ಆಯ್ತು, ಒಂದೂವರೆ ವರ್ಷ. ನೀನು ಯಾವಾಗ ಬಂದೆ?"

"ನಾಲ್ಕೈದು ದಿನಗಳಾದವು." ಅವನಿಂದ ಮತ್ತೊಂದು ಪ್ರಶ್ನೆ
ಹೊರಬರುವ ಮೊದಲೇ ಉತ್ತರ ಸಿದ್ಧವಾಗಿಟ್ಟು ಹೇಳಿದೆ, "ನಾಡಿದು ಹೋಗ್ತಾ
ಇದ್ದೇನೆ."

ಬಹಳ ವರ್ಷಗಳ ನಂತರ ಇಬ್ಬರು ಪರಿಚಿತರು ಭೇಟಿಯಾದರೆ
ತಪ್ಪದೆ ಕೇಳುವ ಪ್ರಶ್ನೆಯನ್ನು ಅವನು ಕೇಳಿದ, "ಮದುವೆಯಾಗಿದೆಯಾ?"

"ಇಲ್ಲ. ನಿನ್ನದು?"

"ಆಗಿದೆ, ಕಳೆದ ವರ್ಷ"

“ಮಕ್ಕಳೆಷ್ಟು?”

– ಪ್ರಶ್ನೆ ಹೊರಬಂದ ಬಳಿಕ ಅದರಲ್ಲಿರುವ ಅಸಂಬದ್ಧತೆ ಮತ್ತು ಮೂರ್ಖತನ ಗಮನಕ್ಕೆ ಬಂತು. ಅವನು ನಕ್ಕುಬಿಟ್ಟ.

“ಏನು ಒಂದು ವರ್ಷದಲ್ಲಿ ಹನ್ನೆರಡು ಮಕ್ಕಳು ಹುಟ್ಟುವರೇನೋ?” ಸ್ವಲ್ಪ ತಡೆದು ತುಸು ಲಜ್ಜೆಯಿಂದ ಹೇಳಿದ, “ಇದುವರೆಗೆ ಮಕ್ಕಳಾಗಿಲ್ಲ. ಮನಸ್ಸಿಗೆ ಬೇಡ ಅಂತ ಕಂಡಿತು. ಏನು ಹೇಳ್ತೀಯಾ?”

“ಹುಂ”

“ನಿನಗೆ ಪರವೂರು ಚೆನ್ನಾಗಿ ಹಿಡಿಸಿದ ಹಾಗಿದೆ. ಊರಿಗೆ ಬಂದರೆ ಎರಡೇ ದಿನ ಇದ್ದು ಓಡಿ ಹೋಗ್ತಿಯಂತೆ, ನಿಮ್ಮಮ್ಮ ಹೇಳ್ತಾ ಇದ್ರು” ಪುಸ್ತಕದ ಬಿಲ್ ಮುಂದೆ ಸರಿಸುತ್ತಾ ಅವನು ಹೇಳಿದ.

“ಹಾಗೇನಿಲ್ಲ. ಎಲ್ಲಾ ಊರೂ ಒಂದೇ ರೀತಿ.” ಬಿಲ್ ಮೇಲೆ ಕಣ್ಣಾಡಿಸುತ್ತಾ ಹೇಳಿದೆ, 1875 ರೂಪಾಯಿ. ಹಿಂದೆಯಾಗಿದ್ದರೆ ಅಮ್ಮ ಗಲಾಟೆಯನ್ನೇ ಎಬ್ಬಿಸಿ ಬಿಡುತ್ತಿದ್ದಳು. ‘1–8–7–5 ರೂಪಾಯಿ! ನಿನ್ನ ತಲೆ ಕೆಟ್ಟುಗಿದೆ ತಾನೇ? ಕೈಯಲ್ಲಿ ದುಡ್ಡು ಇದೆ ಅಂತ ಹೀಗಾ ಖರ್ಚು ಮಾಡೋದು?’ ಈಗ ಯಾರ ತಕರಾರೂ ಇಲ್ಲ. ನನ್ನ ಪುಸ್ತಕದ ಹುಚ್ಚು ಎಲ್ಲರಿಗೂ ಗೊತ್ತಾಗಿ ಬಿಟ್ಟಿದೆ.

ಬಿಲ್ ಹಣ ಪಾವತಿಸಿ ಹೊರಗೆ ಬಂದು ಬಸ್ ಸ್ಟಾಪ್ ಬಳಿ ನಿಂತು ಕೊಂಡೆ. ರಣರಣ ಬಿಸಿಲು. ಸೆಕೆ ಬೇರೆ. ಬಸ್ಸಿಗಾಗಿ ಸುಮಾರು ಐವತ್ತು ಅರವತ್ತು ಜನ ಕಾಯುತ್ತಿದ್ದಾರೆ. ಸ್ಟಾಪಿನೊಳಗೆ ಹೆಚ್ಚೆಂದರೆ ಹತ್ತು ಹದಿನೈದು ಜನ ನಿಲ್ಲಬಹುದು. ಆದರೆ ಬಿಸಿಲು ಅಲ್ಲಿ ನಿಂತವರ ಮುಖದ ಮೇಲೆಯೂ ರಾಚುತ್ತಿದೆ. ಕೆಲವು ಹುಡುಗಿಯರು ಬಿಸಿಲಿಗೆ ಕೊಡೆ ಅಡ್ಡ ಹಿಡಿದಿದ್ದಾರೆ.

ಮೊಣಕಾಲಿನ ಕೆಳಗೆ ಹಿಮ್ಮಡಿ ಮತ್ತು ಪಾದದಲ್ಲಿ ನೋವು ಪ್ರಾರಂಭ ವಾಯಿತು. ಇಡೀ ಕಾಲು ಹಿಂಡಿದ ಹಾಗೆ. ಬಸ್ ಬೇಗ ಬಂದರೆ ತಕ್ಷಣ ಹತ್ತಿ ಮನೆಗೆ ಹೋಗುವುದೇ. ಬೇರೆ ಬಸ್ಸುಗಳು ಬಂದು ಹೋಗುತ್ತಿರಬೇಕಾದರೆ

ಮೆಲ್ಲನೆ ಆ ಪ್ರಶ್ನೆ ಎದ್ದು ಕಾಣಿಸಿತು. ಹಿಂದೆ ಸಾವಿರಾರು ಬಾರಿ ಮುಖ
ತೋರಿಸಿ ಮರೆಯಾದ ಪ್ರಶ್ನೆ. ಮತ್ತೆ ನೆನಪಿಗೆ ಬಂತು.

'ಈ ಎಲ್ಲಾ ಬಸ್ಸುಗಳು ಕೆಂಪು ಬಣ್ಣದ್ದಾಗಿಯೇ ಯಾಕೆ ಇರುತ್ತವೆ?
ಬಸ್ಸಿಗೆ ಕೆಂಪು ಬಣ್ಣವೇ ಇರಬೇಕೆಂದು ಯಾರಾದರೂ ಕಾಯಿದೆ ಮಾಡಿದ್ದಾರಾ?
ಹಾಗಿದ್ದರೆ ಯಾಕಿರಬಹುದು? ಈ ರಾಜ್ಯದಲ್ಲಿಯೇ ಯಾಕೆ ಹೀಗೆ?'

ಈ ಪ್ರಶ್ನೆ ಬಾಲ್ಯದಲ್ಲಿ ಕೇಳಿದೆ. ಆಮೇಲೆ ಕಾಲೇಜಿಗೆ ಹೋದಾಗ
ಹಿಂದೆಂದೋ ಟೀಚರ್ ಹೇಳಿದ್ದು ಕೇಳಿದಂತಾಯಿತು. 'ಕೆಂಪು ಬಣ್ಣ ಬೇರೆ
ಯಾವುದೇ ಬಣ್ಣಕ್ಕಿಂತ ಬೇಗ ಗಮನವನ್ನು ಸೆಳೆಯುತ್ತದೆ.' ಆದರೆ ಕೆಂಪು
ಬಣ್ಣದ ಬಸ್ ಎಂದರೆ ರಕ್ತದ ಅಂದರೆ ಅಪಘಾತ ಮತ್ತು ಚಿತೆಯ ನೆನಪನ್ನು
ತರುತ್ತದೆ. ನಾನು ನಿಮ್ಮ ಸಾವು – ದಾರಿ ಬಿಡಿ, ದಾರಿ ಬಿಡಿ..

ನನ್ನ ಮನೆಯ ಕಡೆಗೆ ಹೋಗುವ ಸಾವು ಬಂತು. ಸಾವು ಯಾರಿಗೂ
ಕಾಯುವುದಿಲ್ಲ. ಹೀಗಾಗಿ ನಾನು ಲಗುಬಗನೆ ಒಳಗೆ ನುಗ್ಗಿದೆ. ಬಾಗಿಲ ಬಳಿ
ಸೀಟ್ ಸಿಕ್ಕಿದ್ದು ನೂರು ಜನ್ಮದ ಪುಣ್ಯವಿರಬೇಕು! ಪುಸ್ತಕದ ಹೊರೆಯನ್ನು
ಸೀಟಿನ ಮೇಲಿಟ್ಟೆ. ಹೊರಪ್ರಪಂಚವನ್ನು ಅದರ ಪಾಡಿಗೆ ಬಿಟ್ಟು ಕಾಲು
ಚಾಚಿ ಕಣ್ಣು ಮುಚ್ಚಿದೆ. ಒಳ್ಳೇ ಗಾಳಿ ಬೀಸುತ್ತಿತ್ತು. ಬಿಸಿಲಿನ ಕಾವು ಕಡಿಮೆ
ಏನೂ ಇರಲಿಲ್ಲ. ಆದರೆ ದಣಿದ ಕೈಕಾಲು, ಕುತ್ತಿಗೆ ಮತ್ತು ಕಣ್ಣುಗಳಿಗೆ ತುಸು
ವಿಶ್ರಾಂತಿ ದೊರೆಯಿತು.

"ಬಾಬೂ, ಕುಂಕುಮನ ಮನೆಗೆ ಹೋಗಿ ಬಾರೋ" ಮುಂಜಾನೆ
ಎಬ್ಬಿಸುವ ಗಡಿಯಾರದ ಅಲಾರಂನಂತೆ ಧ್ವನಿ ಕೇಳಿಬಂತು. ಆಂ! ಅಚಾನಕ
ನನ್ನ ಕಣ್ಣು ತೆರೆದುಕೊಂಡವು. ಬೆಳಿಗ್ಗೆ ಹೊರಡುವಾಗ ಅಮ್ಮ ಹೇಳಿದ
ಮಾತು, "ಕುಂಕುಮನ ಮನೆಗೆ ಹೋಗಿ ಬಾ. ಅವಳಿಗೆ ಸಿಟ್ಟು ಬಂದಿದೆ.
ನೀನು ಅವಳ ಮನೆಗೆ ಹೋಗುವುದಿಲ್ಲವಂತೆ. ಸುಮ್ಮನೆ ಒಮ್ಮೆ ಹೋಗಿ
ಬಾ. ಅವಳು ನಿನ್ನನ್ನು ನೋಡದೆ ಮೂರ್ನಾಲ್ಕು ವರ್ಷಗಳಾಗಿರಬೇಕಲ್ಲ?"

ಬೆಳಿಗ್ಗೆ ಅಂದುಕೊಂಡದ್ದು ಗ್ರಂಥಾಲಯಕ್ಕೆ ಹೋಗಬೇಕೆಂದು. ಅಮ್ಮನ ಮಾತು ಕೇಳಿದ ಮೇಲೆ ಕುಂಕುಮಳಲ್ಲಿಗೆ ಹೋಗುವ ನಿರ್ಣಯವಾಯಿತು. ಆದರೆ ಬಸ್ ಹತ್ತಿ ಕಂಡಕ್ಟರ್‌ಗೆ ಹಣ ಕೊಡುವಾಗ ಮನಸ್ಸು ಮತ್ತೆ ಬದಲಾಯಿತು. ಕುಂಕುಮಳಲ್ಲಿ ಆಮೇಲೆ ಹೋದರಾಯಿತು ಎಂದುಕೊಂಡು ಪುಸ್ತಕದಂಗಡಿಯ ಬಳಿ ಇರುವ ಸ್ಟಾಪ್‌ನ ಹೆಸರು ಹೇಳಿಬಿಟ್ಟೆ. ನಂತರ ಅದು ಮರೆತೇ ಹೋಯಿತು. ವಿಷಯ ತಿಳಿದರೆ ಕುಂಕುಮ ಸಿಟ್ಟಾಗುವುದಂತೂ ಖಂಡಿತ.

ಇಲ್ಲ. ಅವಳಿಗೆ ಹಾಗೆಲ್ಲಾ ಸಿಟ್ಟು ಬರುವುದಿಲ್ಲ. ಬಂದರೆ ಅಳು ಬರಬಹುದು. ಅವಳಲ್ಲಿ ಇರುವುದು ಎರಡೇ ಭಾವಗಳು– ಖುಷಿ ಮತ್ತು ದುಃಖ. ಅದರಲ್ಲಿ ಹೆಚ್ಚು ಕಾಣಿಸಿಕೊಳ್ಳುವುದು ನಗು. ಅದು ಬಿಟ್ಟರೆ ದುಃಖ. ನನಗೆ ಚೆನ್ನಾಗಿ ನೆನಪಿದೆ. ನಾನು ಹೇಳಿದ ಸಮಯಕ್ಕೆ ಮನೆಗೆ ಹೋಗುತ್ತಿರಲಿಲ್ಲ. ಮನೆಯಂಗಳ ತಲುಪಿದೊಡನೆ ಎಲ್ಲರ ಮಾತಿನಲ್ಲಿ ಚಿಂತೆ, ಸಿಟ್ಟು ಕಾಣಿಸಿದರೆ, ಇವಳು ಮಾತ್ರ ಮೌನವಾಗಿ ಅಳುತ್ತಾ ಕುಳಿತುಬಿಡುತ್ತಿದ್ದಳು.

ಅವಳ ಮನೆಯ ಕಡೆಗೆ ಹೋಗುವ ರಸ್ತೆ ಸಮೀಪಿಸಿದೊಡನೆ ಬಸ್ಸಿನಿಂದ ಇಳಿದು, ಅತ್ತ ಹೋಗುವ ಬಸ್ಸಿಗಾಗಿ ಕಾಯತೊಡಗಿದೆ. ನನ್ನ ಮುಖ ಕಂಡೊಡನೆ ಅವಳ ಕಣ್ಣು ಅರಳುವುದು. ಮೊದಲೇ ಆ ಕಣ್ಣು ಇಷ್ಟಗಲ. ಇನ್ನು ಸಂತೋಷದಿಂದ ಎಷ್ಟು ಅಗಲವಾಗಿ ಬಿಡುವುದೋ ಹೇಳಲು ಸಾಧ್ಯವಿಲ್ಲ.

ನಾನು ಅವಳ ಕಣ್ಣಿನ ಗೊಂಬೆಯಾಗಿದ್ದೆ. ಆಮೇಲೆ ಆ ಸಂಬಂಧ ತೆಳುವಾಗುತ್ತಾ ಹೋಯಿತು. ನಾನು ಎಂಟು ಅಥವಾ ಒಂಭತ್ತನೇ ತರಗತಿಯಲ್ಲಿ ಓದುವಾಗ ಇರಬೇಕು ಅಥವಾ ಅದಕ್ಕಿಂತ ಮೊದಲೇ ಇರಬಹುದೇನೋ. ಪುಸ್ತಕಗಳಿಗೆ, ಸ್ನೇಹಿತರಿಗೆ ಮತ್ತು ಆಟಗಳಿಗೆ ಹೆಚ್ಚು ಮಹತ್ವ ನೀಡತೊಡಗಿದೆ. ಆ ನಿಯೋಜಿತ ಬದುಕಿನಲ್ಲಿ ಅವಳ ಮಹತ್ವ ಕಡಿಮೆಯಾಗುತ್ತಾ ಹೋಯಿತು...

ಅವಳ ಮನೆಯ ಕಡೆಗೆ ಹೋಗುವ ಬಸ್ ಬಂದ ಕೂಡಲೇ ಹತ್ತಿ ಒಳಗೆ ಹೋದೆ. ಕಂಬ ಹಿಡಿದು ಹೊರಗಿನ ದೃಶ್ಯ ನೋಡುತ್ತಾ ನಿಂತುಕೊಂಡೆ. ಅವಳಿಗೆ ಬಸ್ ಪ್ರಯಾಣದಲ್ಲಿ ವಾಂತಿಯಾಗುತ್ತಿತ್ತು. ಬಸ್ ಹತ್ತಿದ ಹತ್ತು

ಹದಿನೈದು ನಿಮಿಷಗಳಲ್ಲಿಯೇ ವಾಂತಿ ಶುರುವಾಗುತ್ತಿತ್ತು. ಹಾಗಾಗಿ
ಎಲ್ಲಿಯಾದರೂ ಬಸ್ಸಿನಲ್ಲಿ ಹೋಗುವುದೆಂದರೆ ಅವಳಿಗೆ ತಳಮಳ ಜಾಸ್ತಿ.
ಮನೆ ಮುಟ್ಟಿದೊಡನೆ ಹಿಂಡಿ ಒಗೆದ ಬಟ್ಟೆಯಂತೆ ಬಿದ್ದುಕೊಳ್ಳುತ್ತಿದ್ದಳು.
ಅದರೆ ಇದಕ್ಕಿಂತ ದೊಡ್ಡ ಸಂಗತಿಯೆಂದರೆ ಅವಳು ತಿಂಗಳಲ್ಲಿ ಒಂದೆರಡು
ದಿನ ಹೊಟ್ಟೆ ಅವುಚಿ ಹಿಡಿದು ಕೆಳಧ್ವನಿಯಲ್ಲಿ ಬೊಬ್ಬೆ ಹಾಕುವುದು. ಅದು
ಎಲ್ಲರ ಮನಸ್ಸಿಗೂ ಕಸಿವಿಸಿ ಉಂಟುಮಾಡುತ್ತಿತ್ತು. ಸಹಿಸಲಾಗುತ್ತಿರಲಿಲ್ಲ.
ನಾನಂತೂ ಅವಳ ಹತ್ತಿರ ಕೂಡಾ ಸುಳಿಯುತ್ತಿರಲಿಲ್ಲ. ಅವಳ ಒದ್ದಾಟ
ಮತ್ತು ಕಂಪಿಸುವ ತುಟಿಗಳನ್ನು ನೋಡಿ ದೂರವೇ ಉಳಿಯುತ್ತಿದ್ದೆ. ಎರಡು
ದಿನ ಅಷ್ಟೇ. ಮೂರನೇ ದಿನ ಅವಳು ಎಂದಿನಂತೆ ಹರ್ಷಭಾವದ
ಹುಡುಗಿಯಾಗಿ ಕಾಣುತ್ತಿದ್ದಳು.

ಬಸ್ಸಿನಿಂದ ಕೆಳಗಿಳಿಯುವಾಗ ಮನಸ್ಸಿಗೆ ಕಂಡಿತು, ಬಾಲ್ಯದ ಆ ಸಂಬಂಧ
ನಂತರ ಸಡಿಲವಾದುದು ಹೇಗೆ? ಬರೀ ಐದು ವರ್ಷಗಳಲ್ಲಿ ಅವಳು ಬೆಳೆದಳು.
ಇನ್ನೊಬ್ಬ ತಾಯಿಯಂತಾದಳು. ಈಗಲೂ ಅವಳ ಮನೋಧರ್ಮ ಹಾಗೆಯೇ
ಇದೆ. ಆದರೆ ದೂರವಾಗಿದ್ದಾಳೆ...

ಅವಳು ಹೊಟ್ಟೆ ಹಿಡಿದು ಮಲಗಿಕೊಂಡಿರುತ್ತಿದ್ದ ದಿನಗಳಲ್ಲಿ ನಾನು
ನಾಲ್ಕನೇ ಕ್ಲಾಸ್ ಓದುತ್ತಿದ್ದೆ. ಅವಳು ಎಂಟನೇ ಕ್ಲಾಸ್. ನಾನು ಐದನೇ
ಕ್ಲಾಸಿಗೆ ಬರುವಾಗ ಅವಳು ಎಂಟನೇ ಕ್ಲಾಸಿನಲ್ಲಿಯೇ ಉಳಿದಳು. ಆಮೇಲೆ
ಏಳನೇ ಕ್ಲಾಸಿನಿಂದ ಎಂಟನೇ ಕ್ಲಾಸಿಗೆ ಬರುವಷ್ಟರಲ್ಲಿ ಅವಳು ಹತ್ತನೇ
ಕ್ಲಾಸ್ ತಲುಪಿದಳು. ಅಲ್ಲಿಗೆ ಅವಳ ಓದು ನಿಂತುಬಿಟ್ಟಿತು. ನನ್ನ ಸ್ನೇಹಿತರು,
ಓದು ಮತ್ತು ಆಟ ಬೆಳೆಯುತ್ತಾ ಹೋಯಿತು. ಅವಳ ಪ್ರಪಂಚ ಚಿಕ್ಕದಾಯಿತು.
ಅದಕ್ಕೆ ಹೊಂದಿಕೊಂಡು ಅವಳು ದೂರ ಹೋಗಿರಬೇಕು. ಅವಳ ಮನೆಯ
ದಾರಿ..ಇಲ್ಲಿಂದ ಬಲಕ್ಕೆ ತಿರುಗಿಕೊಳ್ಳಬೇಕು. ನಂತರ ರಸ್ತೆ ಎಡ ದಿಕ್ಕಿಗೆ
ಹೊರಳಿ ಆಮೇಲೆ ನೇರವಾಗಿ ಹೋಗುತ್ತದೆ. ಅಲ್ಲಿಂದ ಎರಡು ಮೂರು
ಅಂಗಡಿಗಳನ್ನು ದಾಟಿದ ನಂತರ ಒಂದು ಸಣ್ಣ ಓಣಿ. ಈ ಓಣಿ ಬಿಸಿ
ಕಾವಲಿಯ ಮೇಲೆ ಬಿದ್ದ ನೀರಹನಿಯಂತೆ ತೋಟ ಸೇರಿ ಮಾಯವಾಗಿ
ಬಿಡುತ್ತದೆ. ಆ ತೋಟದ ಒಂದು ಮೂಲೆಯಲ್ಲಿ ಅವಳ ಪುಟ್ಟ ಮನೆ.

ಮೆಟ್ಟಿಲು ಹತ್ತಿ ಹೋದರೆ ಸಣ್ಣ ಜಗಲಿ. ಆ ಜಗಲಿಯ ಎರಡೂ ಬದಿ ಕುಳಿತುಕೊಳ್ಳುವ ಚಿಟ್ಟೆ. ನಡುವೆ ಬಾಗಿಲು. ಒಳಗೆ ಹೊಕ್ಕರೆ ಬಲಬದಿಯಲ್ಲಿ ಒಂದು ಕೋಣೆ. ಎಡಬದಿ ಅಡುಗೆ ಕೋಣೆ. ಕೆಂಪು ಕಾವಿ ನೆಲ. ಮೇಲೆ ಮುಚ್ಚಿಗೆ ಇಲ್ಲದ ಹೆಂಚಿನ ಮಾಡು. ಆ ಪುಟ್ಟ ಮನೆಯಲ್ಲಿ ಅವಳ ಸಂಸಾರ..

ಆದರೆ ಆ ಅಂಗಡಿಗಳು ಮತ್ತು ಓಣಿ ಎಲ್ಲಿದೆ? ಎದುರಿಗೆ ಎರಡು ಮಹಡಿಗಳ ಮನೆ ಕಾಣುತ್ತಿದೆ. ಜಾಗ ಇದೇ ತಾನೇ. ಹಿಂದೆ ಒಂದೆರಡು ಬಾರಿ ಬಂದಿದ್ದೆನಲ್ಲ. ಮೊದಲು ಬಂದದ್ದು ಅವಳ ಮದುವೆಯ ದಿನ. ಭಾವನನ್ನು ಮದುವೆ ಮಂಟಪಕ್ಕೆ ಕರೆತರಲೆಂದು. ಮತ್ತೆ ಯಾವಾಗಲೋ ಒಮ್ಮೆ. ಹೆಚ್ಚು ಕಡಿಮೆ ಐದು ವರ್ಷ ಕಳೆದಿರಬಹುದು. ಹೆಚ್ಚು ಬದಲಾವಣೆ ಏನೂ ಆಗಿಲ್ಲ. ಓ ಅಲ್ಲೊಂದು ಓಣಿ ಕಾಣಿಸುತ್ತಿದೆ. ಅದೇ ಇರಬೇಕು.

ಓಣಿಯೊಳಗೆ ಕಾಲಿಡುವುದರೊಳಗೆ ಇದು ಅದಲ್ಲವೆಂದು ತಿಳಿಯಿತು. ಅಲ್ಲಿಂದ ಮುಂದೆ ದಾರಿ ಇರಲಿಲ್ಲ. ಹೀಗಾಗಿ ಹೆಜ್ಜೆ ತಿರುಗಿಸಿ ಎರಡೂ ಕಡೆ ದೃಷ್ಟಿ ಬೀರುತ್ತಾ ನಡೆಯತೊಡಗಿದೆ. ಯಾರೋ ಹಿಂದಿನಿಂದ "ಯಾರು ಬೇಕಿತ್ತು?" ಎಂದು ಕೇಳಿದಂತಾಯಿತು. ತಿರುಗಿ ನೋಡಿದರೆ ನನ್ನ ಉತ್ತರದ ನಿರೀಕ್ಷೆಯಲ್ಲಿ ಹೆಂಗಸೊಬ್ಬಳು ನಿಂತಿರುವುದು ಕಂಡಿತು. ನನಗೆ ಗಲಿಬಿಲಿಯಾಯಿತು. ಭಾವನ ನಿಜವಾದ ಹೆಸರೇನು? ರಘೋತ್ತಮ? ರಘುನಾಥ? ಅಥವಾ ರಾಮಚಂದ್ರ? ಅದೃಷ್ಟವಶಾತ್ ಅವರ ಮನೆತನದ ಹೆಸರು ನೆನಪಿಗೆ ಬಂತು. "ಇಲ್ಲಿ ಕಾಮತರ ಮನೆ ಯಾವುದು?" ಆ ಹೆಂಗಸು ನಗು ಬೀರುತ್ತಾ ಇನ್ನೊಂದು ಪ್ರಶ್ನೆ ಮುಂದಿಟ್ಟಳು, "ಯಾರು ರವೀಂದ್ರ ಕಾಮತರ ಮನೆಯಾ?" ಕಿಟಕಿ ತೆರೆದು ಕತ್ತಲೆ ಕೋಣೆಯೊಳಗೆ ಬೆಳಕು ಪ್ರವೇಶಿಸಿದ ಅನುಭವ. ಓ! ಭಾವನ ಹೆಸರು ರವೀಂದ್ರ ಕಾಮತ್! ಮರೆತೇ ಬಿಟ್ಟಿದ್ದೆ!

ಮಹಡಿ ಮನೆಯ ಹಿಂಭಾಗದ ಕಡೆಗೆ ಬೆರಳು ತೋರಿಸುತ್ತಾ ಆಕೆ ಹೇಳಿದರು, "ಅಲ್ಲಿದೆ ನೋಡಿ. ಈ ದಾರಿಯಲ್ಲಿ ಹೋದರಾಯಿತು." ಅವಳಿಗೆ ಧನ್ಯವಾದ ತಿಳಿಸಿ ಮುಂದೆ ಹೆಜ್ಜೆ ಹಾಕಿದಾಗ ಮನಸ್ಸಿನಲ್ಲಿ ಒಂದು ಅವ್ಯಕ್ತ ಮತ್ತು ವಿಚಿತ್ರ ಭಾವ ಮೂಡಿತು.

ಕಾಂಪೌಂಡ್ ಒಳಗೆ ಕೂಡಾ ಬದಲಾವಣೆ ಆಗಿದೆ. ಬೆಳೆದು ನಿಂತ ಗಿಡಗಳ ನಡುವೆ ಅವಳ ಮನೆ ಕಾಣಿಸುತ್ತಿಲ್ಲ. ಮೂಲೆ ಮನೆಯವರು ಆ ಭಾಗವನ್ನು ಖರೀದಿಸಿ ಗೋಡೆ ಕಟ್ಟಿಸಿದ್ದಾರೆ. ಈಗ ಅವಳ ಮನೆಗೆ ಹೋಗಬೇಕಾದರೆ ತೀರಾ ಇಕ್ಕಟ್ಟಾದ ದಾರಿ ಮಾತ್ರ ಇದೆ. ಹತ್ತಿರ ಹೋಗುವವರೆಗೆ ಮನೆ ದೃಷ್ಟಿಗೆ ಬೀಳುವುದಿಲ್ಲ. ಮನೆ ತಲುಪಿದಾಗ ತಿಳಿಯಿತು ಅವಳ ಮನೆಯ ಸ್ವರೂಪ ಕೂಡಾ ಬದಲಾಗಿದೆ. ಹಿಂದಿನ ಆ ಜಗಲಿಯಾಗಲೀ, ಚಿಟ್ಟೆಗಳಾಗಲೀ ಇಲ್ಲ. ಮೆಟ್ಟಲು ಹತ್ತಿಹೋಗಿ ಬಾಗಿಲು ತಟ್ಟಿದೆ. ಈಗ ಅವಳು ಅರಳುವ ಕಣ್ಣುಗಳೊಂದಿಗೆ ಬರುತ್ತಾಳೆ, ಬಂದು–

ಬಾಗಿಲು ತೆರೆಯಿತು. ನಾನು ಬಾಲ್ಯಕಾಲಕ್ಕೆ ಜಾರಿದೆ. ಸುಮಾರು ಒಂಭತ್ತು ವರ್ಷ ವಯಸ್ಸಿನ ಶ್ವೇತವರ್ಣದ ಹುಡುಗಿಯೊಬ್ಬಳು ನಿಂತಿದ್ದಾಳೆ. ನಾನು ಶಾಲೆ ಸೇರಿದಾಗ ನನ್ನ ಬೆರಳು ಹಿಡಿದು ನನಗೆ ಜೊತೆ ನೀಡುತ್ತಿದ್ದ ಕುಕೂವಿನ ಮುಖ ಹೊತ್ತ ಹುಡುಗಿ. ಅದೇ ಬಣ್ಣ, ಅದೇ ಕಣ್ಣು, ಅದೇ ಮೂಗು. ಆದರೆ ತೆಳು ಹಣೆ ಮತ್ತು ಎದ್ದು ಕಾಣುವ ಕೆನ್ನೆ. ಭುಜದವರೆಗೆ ಕತ್ತರಿಸಿದ ಕೂದಲು. ನನ್ನ ಮನಸ್ಸಿನಿಂದ ವಯಸ್ಸು ಜಾರುತ್ತಾ ಹೋಯಿತು. ನಾನು ಮೆಲ್ಲಗೆ ನಗುವ ಪ್ರಯತ್ನ ನಡೆಸಿದೆ. ಅವಳು ಬಲವಂತದ ನಗು ಬರಿಸಿಕೊಂಡಳು. ಅನಿಶ್ಚಿತತೆ ಮತ್ತು ಅಪರಿಚಿತ ಭಾವದಿಂದ ಧ್ವನಿಯೆತ್ತಿ ಅಮ್ಮನನ್ನು ಕೂಗಿದಳು.

"ಆಯೀ, ಯಾರೋ ಬಂದಿದ್ದಾರೆ ನೋಡು"

ಅದೇ ಅಪರಿಚಿತ ಭಾವ ಮತ್ತು ಗೊಂದಲದಿಂದ ಅವಳ ಆಯಿ ಬಂದಳು. ಮುಖ ನೋಡಿದೊಡನೆ ಅವಳ ಚಹರೆ ಬದಲಾಯಿತು. ಕಣ್ಣು ಅರಳಿತು. ತುಟಿಯಲ್ಲಿ ನಗು ಮೂಡಿತು. "ಆಂ!" ಚಕಿತಭಾವದಿಂದ ಅವಳು ಕರೆದಳು, "ಅರೆ ಬಾಬೂ! ಬಾ, ಬಾ." ನಂತರ ಅವಳು ಮಗಳತ್ತ ತಿರುಗಿಕೊಂಡಳು, "ಇವ ನಿನ್ನ ಮಾವ ಕಣೆ, ಗುರುತಾಗಲಿಲ್ವಾ?"

ಅಷ್ಟು ಹೇಳಿದೊಡನೆ ಹುಡುಗಿ ಮಂದಹಾಸ ಬೀರಿದಳು. ನಾನು ಮನಸ್ಸಿನಲ್ಲಿಯೇ 'ಫರಫೆಕ್ಟ್ ಸ್ಮೈಲ್ ಫರಫೆಕ್ಟ್ ಸ್ಮೈಲ್!' ಹೇಳಿಕೊಳ್ಳುತ್ತಾ ಅವಳ ತಲೆ ನೇವರಿಸಿದೆ.

“ಬಾರೋ ಒಳಗೆ, ಕೂತ್ಕೋ” ಕುಕೂ ಹೇಳಿದಳು. ಇಲ್ಲಿ ಮೊದಲು ಬೆಂಚು ಇತ್ತು. ಈಗ ಮೂರು ಕುರ್ಚಿಗಳಿವೆ, ಆದರೆ ಹೊಸತಲ್ಲ, ಹಳೆಯದು. ಹಳೆ ಮೇಜು ಇತ್ತಲ್ಲ..ಓ ಅಲ್ಲಿದೆ. ಅದರ ಮೇಲೆ ಕಪ್ಪು ಬಿಳುಪು ಟಿವಿ ಇಟ್ಟಿದ್ದಾರೆ. ಮಾಡಿಗೆ ಮುಚ್ಚಿಗೆ ಬಂದಿದೆ.

“ಇಲ್ಲಿ ಎಲ್ಲಾ ಬದಲಾಗಿ ಬಿಟ್ಟಿದೆ!”

“ಹಾಗಿಲ್ಲದಿದ್ದರೆ ನಿನ್ನಂತಹ ಯುಗಪುರುಷನ ಪ್ರವೇಶವಾಗಬೇಕಲ್ಲ?” ಅವಳು ಛೇಡಿಸಿದಳು. ನಾನು ಉತ್ತರ ಕೊಡುವ ಮೊದಲೇ, “ಇವತ್ತು ಬರಬಹುದು, ನಾಳೆ ಬರಬಹುದು ಅಂತ ಇಷ್ಟು ದಿನ ಕಾದು ಕುಳಿತದ್ದಾಯಿತು. ಇರಲಿ, ಈಗಲಾದರೂ ಬಂದು ಮುಟ್ಟಿದೆಯಲ್ಲ! ಯಾಕೆ ಇಲ್ಲಿಗೆ ಬರುವ ದಾರಿ ಮರೆತುಹೋಯಿತೇ?”

ನಿಜವಾಗಿಯೂ ನಾನು ದಾರಿ ಮರೆತೆನೆ? ಆದರೆ ಹೇಳುವುದು ಹೇಗೆ? ಮೆಲ್ಲಗೆ ಹುಡುಗಿಯ ಕೈಹಿಡಿದು ಹತ್ತಿರಕ್ಕೆಳೆದುಕೊಂಡೆ. ಅವಳ ಮುಖಕ್ಕೆ ಗಡ್ಡ ಸವರಿದೆ. ಗಡ್ಡ ತಾಗಿ ಅವಳಿಗೆ ಕಚಗುಳಿಯಾಗಿರಬೇಕು, ಅವಳು ನಗುತ್ತಾ ಮುಖ ತಿರುಗಿಸಿದಳು.

“ಇರು. ಈಗ ಬಂದೆ” ಕುಕೂ ಒಳಗೆ ಹೋದಳು. ನಾನು ಹುಡುಗಿಯ ಹೆಸರು ಕೇಳಿದೆ. ತಕ್ಷಣ ಉತ್ತರ ಬಂತು ‘ಜಲಜಾ’. ದೊಡ್ಡವಳ ಹೆಸರು ನೆನಪಿಗೆ ಬಂತು ‘ವಿಮಲಾ’!

“ಕುಕೂ, ಈ ಹುಡುಗಿಯ ಹೆಸರು ಯಾರು ಆಯ್ಕೆ ಮಾಡಿದ್ದು, ನೀನಾ? ಅಥವಾ ಭಾವಾಜಿಯಾ?”

“ನಾನೇ. ಯಾಕೆ ಚೆನ್ನಾಗಿಲ್ವಾ ” ಹಳೆಕಾಲದ ಹೆಸರು. ಹಾಗೆಂದು ಹೇಳಿ ಅವಳ ಮನಸ್ಸು ನೋಯಿಸಲೇನು? “ಹಾಗೇನಿಲ್ಲ. ಹೀಗೆ ನೆನಪಿಗೆ ಬಂತು. ದೊಡ್ಡ ಸೊಸೆ ವಿಮಲಾ ಎಲ್ಲಿ?”

“ಅವಳಿಗೆ ನಾಲ್ಕು ಗಂಟೆಯವರೆಗೆ ಶಾಲೆ ಇದೆ. ಆಮೇಲೆ ಟ್ಯೂಶನ್. ಐದೂ ಮುಕ್ಕಾಲಿಗೆ ಬರಬಹುದು. ಅವಳಿಗೆ ನಿನ್ನ ನೆನಪು ಇದೆ ಮಾರಾಯ”

ಮಾತನಾಡುತ್ತಾ ಕುಕೂ ಎರಡು ಗ್ಲಾಸಿನಲ್ಲಿ ಶರಭತ್ ತಂದಳು. ಒಂದನ್ನು ನನಗೆ ನೀಡಿ ಇನ್ನೊಂದನ್ನು ಮಗಳ ಕೈಗಿತ್ತು ಹೇಳತೊಡಗಿದಳು, "ಒಂದೆರಡು ಭಾರಿ ನಿನಗೆ ಪತ್ರ ಬರೆಯಲು ಹೊರಟಿದ್ದಳು. ನಾನೇ ಬೇಡವೆಂದು ಹೇಳಿದೆ."

"ಯಾಕೆ?"

"ಸುಮ್ಮನೆ ನಿನಗೆ ಯಾಕೆ ತೊಂದರೆ ಅಂತ"

ತಟ್ಟನೆ ನನಗೆ ಹೊಳೆಯಿತು. ಯೂನಿಫಾರ್ಮ್! ಸ್ಕೂಲ್ ಫೀಸ್! ಪುಸ್ತಕಗಳಿಗೆ ಹಣ! ಭಾವನಿಗೆ ಸಾಕಷ್ಟು ಆದಾಯವಿಲ್ಲ. ನನಗೆ ಇವರ ನೆನಪು ಯಾಕೆ ಬರಲಿಲ್ಲ? ಒಳಗೆಲ್ಲೊ ಚುಚ್ಚಿದ ಹಾಗಾಯಿತು.

"ಹಾಗೇನಿಲ್ಲ, ಪತ್ರದಿಂದ ತೊಂದರೆ ಏನು ಬಂತು? ವಿಮಲಾ ಯಾವ ಕ್ಲಾಸಿನಲ್ಲಿ ಓದುತ್ತಿದ್ದಾಳೆ, ಐದು ಇರಬೇಕಲ್ಲ?"

ಅವಳು ಗಟ್ಟಿಯಾಗಿ ನಕ್ಕಳು. "ನೀನು ಯಾವ ಜಗತ್ತಿನಲ್ಲಿ ಇದ್ದಿಯೋ ಮಾರಾಯ? ಅವಳು ಎಂಟನೇ ಕ್ಲಾಸ್ ತಲುಪಿಯಾಯ್ತು. ಇನ್ನು ಎರಡೇ ವರ್ಷ, ಆಮೇಲೆ ಕಾಲೇಜ್ ಸೇರುತ್ತಾಳೆ."

ನಾನು ಜಲಜಾಳ ಕೈ ನೇವರಿಸುತ್ತಾ ಮೂರ್ಖನಂತೆ ಕುಳಿತುಬಿಟ್ಟೆ. ಹುಡುಗಿ ತುಂಬಾ ನಗುತ್ತಿದ್ದಳು. ನನ್ನಿಂದ ಅವಳ ಮುಖ ನೋಡುವುದು ಸಾಧ್ಯವಾಗಲಿಲ್ಲ. ಆದರೆ ಕುಕೂ ಅವಳಲ್ಲಿ ಹೇಳಿದಳು, "ನಿನ್ನ ಮಾಮ ಒಬ್ಬ ಪೆದ್ದು ಕಣೆ. ಅವನು ಯೋಚಿಸುವುದೇನು ಗೊತ್ತಾ, ನಾನು ಇನ್ನೂ ನಿಮ್ಮನ್ನು ಕಂಕುಳಲ್ಲಿ ಹಿಡಿದು ತಿರುಗಾಡುತ್ತಿದ್ದೇನೆ ಎಂದುಕೊಂಡು– ಪೆದ್ದ!"

ತನ್ನ ಮಾತಿನ ಹಿಂದೆ ಇರುವ ಅಪ್ಪಟ ವಾತ್ಸಲ್ಯವನ್ನು ಸೂಚಿಸಲೆಂಬಂತೆ ಅವಳು ತನ್ನ ಅಂಗೈಯಿಂದ ನನ್ನ ತಲೆ ಸವರಿದಳು. ತಕ್ಷಣ ಆಶ್ಚರ್ಯ ಪಟ್ಟು ಹೇಳಿದಳು– "ಅರೆ! ನಿನ್ನ ಕೂದಲೆಲ್ಲಾ ಉದುರಿ ಹೋಗಿದೆ!"

"ನೀನೇನು ತಿಳ್ಕೊಂಡೆ, ನಾನಿನ್ನೂ ಹಾಲು ಕುಡಿಯುವ ಆಗಿನ ಬಾಬು ಎಂದುಕೊಂಡೆಯಾ?"

"ಅದೇನೂ ಇಲ್ಲ ಬಿಡು. ನೀನು ಕೂದಲಿಗೆ ಎಣ್ಣೆ ಹಾಕುವುದಿಲ್ಲ. ಅದಕ್ಕೇ ನಿನ್ನ ಕೂದಲು ಉದುರಿದೆ. ಎಣ್ಣೆಸ್ನಾನ ಎಂದರೆ ಇವನಿಗೆ ಆಗುತ್ತಿರಲಿಲ್ಲ."

"ಎಣ್ಣೆ ಹಚ್ತೀನಿ. ಎಣ್ಣೆ ಸ್ನಾನವನ್ನೂ ಮಾಡ್ತೀನಿ. ಸಮಸ್ಯೆ ಅದಲ್ಲ. ಸಮಸ್ಯೆ ದೊಡ್ಡ ಪಟ್ಟಣದ್ದು. ದೀರ್ಘ ಪ್ರಯಾಣದ್ದು. ಟ್ರಾಫಿಕ್ ಸಿಗ್ನಲ್ ಮತ್ತು ಟ್ರಾಫಿಕ್ ಜ್ಯಾಮ್‌ನದು. ಬೆಳಿಗ್ಗೆ ಆಫೀಸಿಗೆ ಹೋಗುವಾಗ ಕೆಂಪು ಸಿಗ್ನಲ್‌ನಲ್ಲಿ ವಾಹನ ದಟ್ಟಣೆ ಇರುತ್ತಲ್ಲ, ಅಲ್ಲಿ ಎಷ್ಟು ಜನ ಭಿಕ್ಷುಕರು ಬಂದು ಹಣ ಕೇಳ್ತಾರೆ ಅಂದರೆ, ಎಲ್ಲರಿಗೂ ಕೊಡಲು ನನ್ನ ಬಳಿ ಹಣ ಇದ್ದರೆ ತಾನೇ. ಹಾಗಾಗಿ ನಾನು ಮಾಡುವುದೇನು ಗೊತ್ತೇ? ಮುಷ್ಠಿಯಿಂದ ಕೂದಲು ಕಿತ್ತು ಅವರಿಗೆ ಕೊಡ್ತೇನೆ. ನೀನು ಹೇಳಿದ ಹಾಗೆ ಕೂದಲು ಉದುರಿ ಹೋಗುವುದಲ್ಲ, ನಾನು ಕಿತ್ತು ಕೊಡುವುದು!"

"ಈ ಕತೆಯನ್ನೆಲ್ಲಾ ನೀನು ಜಲಜನಿಗೆ ಹೇಳ್ತಾ ಕೂತ್ಕೊ. ಹತ್ತು ನಿಮಿಷಗಳಲ್ಲಿ ಊಟದ ವ್ಯವಸ್ಥೆ ಮಾಡ್ತೇನೆ"

ಅವಳು ಒಳಗೆ ಹೋದಳು. ಅಲ್ಲಿಂದಲೇ ಪ್ರಶ್ನೆ ಕೇಳುತ್ತಾ ಹರಟೆ ಹೊಡೆಯುತ್ತಾ ಇದ್ದಳು. ನಡುನಡುವೆ ಏನನ್ನೋ ಕತ್ತರಿಸುವ, ಪಾತ್ರೆಗೆ ನೀರು ಸುರಿಯುವ, ಒಗ್ಗರಣೆ ಹಾಕುವ ಸದ್ದು ಕೇಳಿ ಬರುತ್ತಿತ್ತು. ಜಲಜ ನನ್ನ ತೊಡೆಯಿಂದ ಇಳಿದು ಅಡುಗೆ ಮನೆಗೆ ಹೋದಳು.

ನಾನು ಕುಳಿತಲ್ಲಿಯೇ ಸುತ್ತ ದೃಷ್ಟಿಬೀರಿದೆ. ಗೋಡೆಗಳು ಮೊದಲಿಗಿಂತ ಪಚ್ಚು ಹಳೆಯದಾಗಿ ಕಾಣುತ್ತಿವೆ. ಜಗಲಿಯ ಕಂಬಗಳು ಕೂಡಾ ಬಣ್ಣಗೆಟ್ಟಿವೆ. ಮಾಸಿದ ಮೇಜು ಮತ್ತು ಕುರ್ಚಿಗಳು. ಹೆಂಚು ಒಡೆದು ಮಳೆನೀರು ಇಳಿದು ಗೋಡೆಯ ಮೇಲೆಲ್ಲಾ ಕಲೆಗಳು. ಗೃಹಪ್ರವೇಶದ ನಂತರ ಮನೆಗೆ ಸುಣ್ಣ ಬಳಿದ ಹಾಗೆ ಕಾಣುತ್ತಿಲ್ಲ. ಕೆಂಪು ನೆಲದಲ್ಲಿ ತೇಪೆ ಹಾಕಿದ ಚಿಹ್ನೆಗಳು. ಮಲಗುವ ಕೋಣೆಯ ಮಂಚದ ಮೇಲೆ ಹರಿದ ಚಾಪೆ. ಹಳೆ ಬಟ್ಟೆಗಳು. ಎಣ್ಣೆ ತಾಗಿ ಕಪ್ಪಾಗಿರುವ ದಿಂಬುಗಳ ರಾಶಿ. ಗೋಡೆಯ ಮೊಳೆಗೆ ಬಟ್ಟೆಗೇ ತೂಗಿಸಿರುವ ಕನ್ನಡಿ ಮತ್ತು ಕ್ಯಾಲೆಂಡರ್. ಅದೇ ಮೊಳೆಗೆ ಸಿಕ್ಕಿಸಿದ ಬಾಚಣಿಗೆ. ಆ ಕೋಣೆಯ ಮಾಡಿಗೆ ಮುಚ್ಚಿಗೆ ಇಲ್ಲ.

ದೃಷ್ಟಿ ಬದಲಾಯಿಸಿ ಕುಳಿತಲ್ಲಿಯೇ ಮೇಲೆ ನೋಡಿದೆ. ಲಾರಿಯಲ್ಲಿ ಬಂದ ಸಾಮಾನಿನ ಹಲಗೆಗಳನ್ನು ಉಪಯೋಗಿಸಿ ಭಾವ ಮುಚ್ಚಿಗೆ ಕಟ್ಟಿದ್ದಾರೆ!

ಮನಸ್ಸಿಗೆ ನೋವಾಯಿತು. ಕುಕೂವಿಗೆ ಇನ್ನೂ ಒಳ್ಳೆಯ ಬದುಕು ಸಿಗುವುದು ಸಾಧ್ಯವಿತ್ತು. ಆಗ ಅವಳಿಗೆ ಶಿಕ್ಷಣ ಇರಲಿಲ್ಲ. ಅಪ್ಪ ಅಮ್ಮನಲ್ಲಿ ಹಣ ಇರಲಿಲ್ಲ. ಹೀಗಾಗಿ ಅವರು ಅವಸರ ಮಾಡಿದರು. ಅವಳು ಮಾತನಾಡಲಿಲ್ಲ. ನಾನು ಕೂಡಾ ಏನೂ ಮಾಡಲಾರದಾದೆ. ಹತ್ತನೇ ಕ್ಲಾಸ್ ಓದುವ ಹುಡುಗ ಮಾಡುವುದಾದರೂ ಏನು! ಎಲ್ಲರೂ ಸೇರಿ ಅವಳನ್ನು ಬೀದಿಪಾಲು ಮಾಡಿದರು.

ತಟ್ಟನೆ ಇನ್ನೊಂದು ವಿಚಾರ ಹೊಳೆಯಿತು. ಹಾಗಿದ್ದರೂ ಇವಳು ಸಂತೋಷವಾಗಿಯೇ ಇದ್ದಾಳೆ! ಯಾರ ಜೊತೆಯೂ ನಿಷ್ಠೂರ ಇಲ್ಲ. ಬೇಡುವುದಿಲ್ಲ. ಸಿಟ್ಟಿಲ್ಲ.

ಒಳಗಿನಿಂದ ಕರೆ ಬಂತು. "ಬಾಬೂ ಬಾ, ಊಟಕ್ಕೆ." ನಾನು ಹೋಗಿ ಮಣೆಯಲ್ಲಿ ಕುಳಿತೆ. "ನೋಡು, ವಿಶೇಷ ಏನೂ ಮಾಡಿಲ್ಲ. ನೀನು ಬೆಳಿಗ್ಗೆ ಬಂದಿದ್ದರೆ ಮಾಡಬಹುದಿತ್ತು. ಈಗ ಈ ನಾಲ್ಕು ಗಂಟೆಗೆ ಎಂತಹ ಸಮಾರಾಧನೆ? ಆದರೆ ನಿನ್ನನ್ನು ನೋಡಿದ ಕೂಡಲೇ ನೀನು ಊಟ ಮಾಡದೆ ಬಂದಿರುವುದು ಗೊತ್ತಾಯ್ತು. ಸ್ವಲ್ಪ ಸಾರು ಬಡಿಸಲೇನು?"

"ಭಾವಾಜಿ ಊಟ ಆಯ್ತಾ?"

"ನಿನ್ನ ಭಾವಾಜಿ ಊಟಕ್ಕಾಗಿ ನಾಲ್ಕು ಗಂಟೆಯವರೆಗೆ ಕಾಯ್ತಾರೇನು? ಅವರಿಗೆ ಯಾವುದೇ ವಿಚಾರವಿರಲಿ ಒಂದು ನಿಷ್ಠೆ ಇದೆ. ಆಯಾ ಸಮಯಕ್ಕೆ ಆಯಾ ಕೆಲಸ ನಡೆಯಬೇಕು. ನೀನು ಬರುವ ಮೊದಲೇ ಅವರು ಊಟ ಮುಗಿಸಿ ಹೋಗಿದ್ದಾರೆ. ಇನ್ನು ಬರುವುದು ರಾತ್ರಿ ಎಂಟೂವರೆಗೆ. ಅದಿರಲಿ ನಿನಗೆ ಈ ಸುದ್ದಿ ಗೊತ್ತಾ? ಕನಕ ಅಕ್ಕನ ಮಗಳು ಸತ್ತುಹೋದಳಲ್ಲ. ಅದೂ ದೇವಸ್ಥಾನದ ಹೊಳೆಯಲ್ಲಿ ಬಿದ್ದು. ಅವಳು ಅಲ್ಲಿ ಯಾಕೆ ಹೋದಳೋ ಯಾರಿಗೂ ಗೊತ್ತಿಲ್ಲ! ಊರಿನವರು ಹೇಳ್ತಾರೆ ಅವಳು ಗರ್ಭಿಣಿ ಇದ್ಲು ಅಂತ. ಆದರೆ ನಾನು ಅದನ್ನು ನಂಬುವುದಿಲ್ಲ. ಅವಳು ಅಂಥ ಕೆಟ್ಟಕೆಲಸಕ್ಕೆ

ೋಗುವ ಹುಡುಗಿಯಂತೂ ಅಲ್ಲ. ಮೊನ್ನೆ ಅವಳ ಆಯಿ ಬಂದಿದ್ರು.
ಳು ಅಂದ್ರೆ ಅಳು.."

ಅವಳು ಮಾತನಾಡುತ್ತಾ ಹೋದಳು. ನಾನು ಯಾಂತ್ರಿಕವಾಗಿ
ಲೆಯಲ್ಲಾಡಿಸುತ್ತಾ ಕೂತೆ. ಗಾಳಿಯಲ್ಲಿ ಹಾರಿ ಬಂದ ಗರಿಯ ಹಾಗೆ ನನ್ನ
ನಸ್ಸಿನಲ್ಲಿ ಜಲಜ ಹೆಸರು ಸ್ಥಿರವಾಯಿತು. ಎಷ್ಟೋ ವರ್ಷಗಳ ಹಿಂದೆ
ಲಜ ಪದಕ್ಕೆ 'ಪಂಕಜ' ಎನ್ನುವ ಅರ್ಥವಿದೆ ಎಂದು ಹೇಳಿದ್ದು ನೆನಪಿಗೆ
ಂತು. ಪಂಕ ಅಂದರೆ ಕೊಳಚೆ. ಕೊಳಚೆಯಲ್ಲಿ ಅರಳಿದ ಕಾರಣಕ್ಕಾಗಿ
ಮಲಕ್ಕೆ ಪಂಕಜ ಎಂದು ಹೇಳುತ್ತಾರೆ. ನನ್ನ ಮುಂದೆ ಕುಳಿತಿರುವ ಈ
ಮಲ'ಳ ಮೇಲೆ ನಾನು ನೋಟ ಬೀರಿದೆ.

ಕುಕೂ ಮಾತನಾಡುತ್ತಲೇ ಇದ್ದಳು. ಅವಳ ಒಂದೇ ಒಂದು ಮಾತಿನಲ್ಲಿ
ೂಡಾ ಅವಳ ಯಾತನೆ ವ್ಯಕ್ತಗೊಳ್ಳುತ್ತಿರಲಿಲ್ಲ. ಎಲ್ಲವೂ ಊರಿನ ಸುದ್ದಿಗಳೇ.
ಯಾರು ಹುಟ್ಟಿದರು, ಯಾರು ಸತ್ತರು, ಯಾರಿಗೆ ಮದುವೆಯಾಯಿತು.
ಯಾರಿಗೆ ನೌಕರಿ ಸಿಕ್ಕಿತು. ಪರಊರಿನಿಂದ ಯಾರು ಬಂದರು.. ಹೀಗೆ
ದೇ ರೀತಿಯ ಸುದ್ದಿಗಳು.

ಐದೂವರೆ ಗಂಟೆಗೆ ಹೊರಡುವ ಸಂಕೇತವಾಗಿ ಎದ್ದು ನಿಂತು ಅವಳಲ್ಲಿ
ೇಳಿದೆ. "ನಾಳೆ ನೀನೂ ಭಾವಾಜಿಯೂ ಮಕ್ಕಳನ್ನು ಕರೆದುಕೊಂಡು ನಮ್ಮಲ್ಲಿಗೆ
ನ್ನಿ. ಅಲ್ಲಿ ಕುಳಿತು ಇನ್ನೂ ಮಾತನಾಡೋಣ"

"ಹುಂ, ನೋಡೋಣ" ಅವಳು ನಕ್ಕು ಅನಿಶ್ಚಿತತೆಯಿಂದ
ಲೆಯಾಡಿಸಿದಳು. 'ನಾಳೆ ಯಾವುದೇ ಕಾರಣಕ್ಕೆ ಬರಲು ಆಗದಿದ್ದರೆ ತಪ್ಪು
ಳಿಯಬೇಡ' ಎನ್ನುವ ಅರ್ಥದಲ್ಲಿ ಹೇಳಿದಳು, "ನಿನ್ನೊಂದಿಗೆ ಎರಡು
ಾತು ಆಡಬೇಕೆಂದಿತ್ತು. ನೀನು ಬಂದೆಯಲ್ಲ? ಸಾಕು. ಅಲ್ಲಿಗೆ ಯಾವಾಗ
ೇಕಾದರೂ ಹೋಗಬಹುದು."

ಸಾಕ್ಸ್ ಹಾಕಿ ಶೂ ಲೇಸ್ ಕಟ್ಟುವಾಗ ಅವಳು ನೋಡುತ್ತಾ ನಿಂತು
ೊಂಡಳು. ಪುಸ್ತಕದ ಕಟ್ಟನ್ನು ಎತ್ತಿ ಹೊರಟಾಗ ಜಲಜಾಳನ್ನು ಕರೆದು
ೇಳಿದಳು. "ಮಾಮನಿಗೆ ಆ ಎಣ್ಣೆ ಬಾಟಲು ತಂದುಕೊಡಮ್ಮಾ." ಜಲಜ

ಓಡಿ ಹೋಗಿ ಎಣ್ಣೆಬಾಟಲಿ ಹಿಡಿದು ಬಂದಳು. ಅದರಲ್ಲಿ ಊರಿನ ಔಷಧಿ ಬೆರೆಸಿ ಕುದಿಸಿದ ಎಣ್ಣೆ ಇತ್ತು. ತೆಗೆದುಕೊಳ್ಳಬೇಕೋ ಬೇಡವೋ ಎನ್ನುವ ಆಲೋಚನೆಯಲ್ಲಿದ್ದಾಗ, ಅವಳು ಮತ್ತೆ ಹೋಗಿ ಪ್ಲಾಸ್ಟಿಕ್ ಚೀಲ ತಂದು ಅದರಲ್ಲಿ ಆ ಬಾಟಲಿ ಹಾಕಿ ನನ್ನ ಕೈಗಿತ್ತಳು.

ನಾನು ಮೆಟ್ಟಲಿಳಿದು ಮುಂದೆ ನಡೆದೆ. ಹಿತ್ತಿಲ ಮುಂದಿನ ರಸ್ತೆ ತಲುಪುವವರೆಗೆ ಅವರಿಬ್ಬರೂ ನನ್ನ ಹಿಂದೆಯೇ ಬಂದರು. ರಸ್ತೆಯಲ್ಲಿ ಒಂದು ಗಳಿಗೆ ನಿಂತು, 'ಹೋಗಿ ಬರುತ್ತೇನೆ' ಎಂದು ತಿಳಿಸಿ ಮುಂದುವರಿದೆ. ಹತ್ತು ಹನ್ನೆರಡು ಹೆಜ್ಜೆ ಹಾಕಿದ ಬಳಿಕ ಸೋದರಸೊಸೆಗೆ ಟಾ ಟಾ ಮಾಡಲು ತಿರುಗಿದೆ. ಅವಳು ತನ್ನಮ್ಮನ ಸೀರೆ ಹಿಡಿದು ಅವಳ ಮುಖ ನೋಡುತ್ತಾ ಏನೋ ಹೇಳುತ್ತಿದ್ದಳು. ಅವಳ ಕೈಬೆರಳು ನನ್ನ ಕಡೆಗೆ ಅಥವಾ ನನ್ನ ಕೈಯಲ್ಲಿದ್ದ ಪುಸ್ತಕದ ಗಂಟಿನ ಕಡೆಗೆ ಇತ್ತು. ತಟ್ಟನೆ ನನ್ನೊಳಗೆ ಮಿಂಚು ಹರಿದಂತಾಯಿತು. ನಾನು ಆ ಮಕ್ಕಳಿಗಾಗಿ ಐವತ್ತು ಪೈಸೆಯ ಚಾಕಲೇಟು ಕೂಡಾ ತಂದಿರಲಿಲ್ಲ!

ನನ್ನ ಕಾಲಿನ ಬೆರಳುಗಳು ಬೇರುಗಳಾಗಿ ನೆಲದಲ್ಲಿ ನೆಟ್ಟವು. ರಸ್ತೆಯ ಡಾಮರು ಅಂಟಾಯಿತು. ಕಾಲು ಎತ್ತಿ ಮುಂದಿಡುವುದು ಸಾಧ್ಯವಾಗದೇ ಹೋಯಿತು.



# ಕಾಡಿನ ದಾರಿಯಲ್ಲಿ

ಹೊತ್ತು ಕಳೆದು ರಾತ್ರಿಯಾಗಿದೆ.

ಇಡೀ ಜಗತ್ತಿಗೇ ಕಪ್ಪು ಶಾಯಿ ಚೆಲ್ಲಿದಂತೆ ಕತ್ತಲೆ ಕವಿದಿದೆ. ಕಣ್ಣಿಗೆ ಸೂಜಿ ಚುಚ್ಚಿದರೂ ತಿಳಿಯಲಾಗದಷ್ಟು ಗಾಢವಾದ ಕತ್ತಲೆ. ಈ ಕತ್ತಲೆಗೆ ಬೆಳಕಿನಕಣ ಸಿಂಪಡಿಸುವ ಹಾಗೆ ಮಿಂಚುಹುಳುಗಳ ಹಾರಾಟ. ಕೀಟಗಳ ಕಿರಿಚಾಟ. ಎಲ್ಲಾ ಜೀವಗಳ ಅಸ್ತಿತ್ವವನ್ನು ಅದುಮಿಟ್ಟ ಹಾಗೆ.

ದೇಹದ ಮೂಳೆಮೂಳೆಗಳಿಗೆ ನಡುಕ ಹುಟ್ಟಿಸುವಂತಿರುವ ಚಳಿಯಲ್ಲಿ ಮಿಥಿಲಾ ನಗರ ಕಂಪಿಸುತ್ತಿತ್ತು.

ಆದರೆ ಯಾಜ್ಞವಲ್ಕ್ಯರಿಗೆ ಈ ಕತ್ತಲೆಯ ಅಥವಾ ಚಳಿಯ ಕಡೆಗೆ ಗಮನವಿಲ್ಲ. ಅವರು ಹೊರಗೆ ನೋಡುತ್ತಾ ಕುಳಿತಿದ್ದಾರೆ. ಅವರ ನೋಟ ಕತ್ತಲನ್ನು ಸೀಳಿ ಅಗಣಿತ ನಕ್ಷತ್ರಗಳ ಶೋಧನೆಯಲ್ಲಿ ನಿರತವಾಯಿತು. ಸ್ವಲ್ಪ ಹೊತ್ತು ಕಳೆದು ಕುಳಿತಲ್ಲಿಂದ ಎದ್ದು ನಿಂತ ಅವರು ಅತ್ತಿತ್ತ ಹೆಜ್ಜೆ ಹಾಕತೊಡಗಿದರು.

ಕೂದಲು ಬೆಳ್ಳಗಾಗಿದೆ. ಚರ್ಮ ಸುಕ್ಕುಗಟ್ಟಿದೆ. ಲೌಕಿಕ ಜಗತ್ತಿನ ಸಂಬಂಧದಿಂದ ಕಳಚಿಕೊಂಡು ವಾನಪ್ರಸ್ಥ ಕೈಗೊಳ್ಳುವ ಸಮಯ ಬಂದಿದೆ... ಇಂದಿನವರೆಗೆ ಕೂಡಿ ಹಾಕಿರುವ ಸಮಸ್ತ ಆಸ್ತಿಯ ಉತ್ತರಾದಾಯಿತ್ವವನ್ನು ಬೇರೆಯವರಿಗೆ ವಹಿಸಿಕೊಟ್ಟು ಕಾಡಿನತ್ತ ಹೆಜ್ಜೆ ಹಾಕುವ ಸಮಯ ಬಂದಿದೆ...

ಹಾಗೆ ಹೋಗಲು ಯಾವುದೇ ಅಡ್ಡಿ ಇಲ್ಲ. ಪೂರ್ವಜರು ಮಾಡಿದ ಸುಕೃತದಿಂದ ಈ ಜನ್ಮ ಸಾರ್ಥಕವಾಗಿದೆ. ಜ್ಞಾನ ಸಂಪಾದನೆಯಲ್ಲಿ ಇಡೀ ಜನ್ಮವನ್ನು ಕಳೆದೆ. ಆದರೆ ಜ್ಞಾನ ಸಿಕ್ಕಿತೇ? ಜನ್ಮ ಸಾರ್ಥಕವಾಯಿತೆ? ಗೊತ್ತಿಲ್ಲ. ಆದರೆ ತೃಪ್ತಿ ಅನುಭವಿಸಿದ್ದೇನೆ. ಪುರುಷಾರ್ಥದ ಭಾವನೆ ಇದೆ. ಇಡೀ ಜಗತ್ತಿನಲ್ಲಿ ತಾನು ಮಹಾ ವೈದಿಕ ಪಂಡಿತನೆಂಬ ಹೆಸರು ಸಂಪಾದಿಸಿದೆ. ಅದನ್ನು ಅನುಸರಿಸಿ ಬಹಳ ಅವಕಾಶಗಳು ಕೂಡಾ ದೊರೆತವು...

ಅವಕಾಶಗಳ ವಿಚಾರ ಬಂದಾಗ ನೆನಪಾಗುತ್ತದೆ.. ಸಾಮ್ರಾಟ್ ಜನಕನನ್ನು ದೇವರು ಚೆನ್ನಾಗಿಟ್ಟಿರಲಿ! ವಿದೇಹದ ಸಾಮ್ರಾಟರು ಜಗತ್ತಿನ ಸರ್ವಶ್ರೇಷ್ಠ ವೇದಪಂಡಿತರ ಹುಡುಕಾಟದಲ್ಲಿದ್ದಾರೆ ಎಂದು ಯಾರೋ ತಿಳಿಸಿದ್ದರು. ವೇದ ತಿಳಿದವರ ಬುದ್ಧಿವಂತಿಕೆ ಎಲ್ಲರಿಗೂ ತಿಳಿದಿರುವುದೇ. ಆದರೆ ಇವರಲ್ಲಿ ಸರ್ವಶ್ರೇಷ್ಠ ಜ್ಞಾನಿಯ ನಿರ್ಣಯ ಆಗಬೇಕಾಗಿದೆ. ಅವರಿಗೆ ದೊಡ್ಡ ಬಹುಮಾನ ದೊರೆಯಲಿದೆ...

ಹೋಗಿ ನೋಡಿದರೆ ಅಲ್ಲಿ ಮಹಾಯಜ್ಞದ ತಯಾರಿ ನಡೆದಿದೆ. ಯಜ್ಞಭೂಮಿಯ ಬಳಿ ಒಂದು ಸಾವಿರ ಗೋವುಗಳು.. ಇನ್ನು ಪ್ರತಿಯೊಂದು ಗೋವಿಗೆ ಹತ್ತುಪಟ್ಟು ಚಿನ್ನದ ಶೃಂಗಾರ! ಕಣ್ಣು ತುಂಬುವ ದೃಶ್ಯ! ಕುರು ಮತ್ತು ಪಾಂಚಾಲ ದೇಶದಿಂದ ಬಂದಂತಹ ವಿದ್ವಾನ್ ಬ್ರಾಹ್ಮಣರು ಉಗುಳು ನುಂಗುತ್ತಾ ನಿಂತಿದ್ದಾರೆ!

ಕೆಲವೇ ಸಮಯದಲ್ಲಿ ಸಾಮ್ರಾಟರ ಧ್ವನಿ ಕೇಳಿಬಂತು– "ಆದರಣೀಯ ಬ್ರಾಹ್ಮಣರೇ! ನಿಮ್ಮಲ್ಲಿ ಸರ್ವಶ್ರೇಷ್ಠನಾಗಿರುವ ಬ್ರಾಹ್ಮಣನಿಗಾಗಿ ಈ ಗೋವುಗಳು ಕಾಯುತ್ತಿವೆ. ಆತ ಮುಂದೆ ಬಂದು ಈ ಗೋವುಗಳನ್ನು ಕರೆದೊಯ್ಯುವುದು.."

ಎಲ್ಲಾ ಬ್ರಾಹ್ಮಣರು ಒಬ್ಬರ ಮುಖ ಇನ್ನೊಬ್ಬರು ನೋಡುತ್ತಾ ನಿಂತಿದ್ದಾರೆ. "ಆತ ನಾನೇ" ಎಂದು ಹೇಳಿ ಮುಂದೆ ಬಂದು ಗೋವುಗಳನ್ನು ಕರೆದುಕೊಂಡು ಹೋಗಲು ಯಾರಿಗೂ ಧೈರ್ಯವಿರಲಿಲ್ಲ. ಸ್ವತಃ ಸಾಮ್ರಾಟರು ಒಬ್ಬ ತತ್ವಜ್ಞಾನಿ ಬೇರೆ..

ಸಾಮ್ರಾಟರ ಮಾತು ಮುಗಿಯುತ್ತಿದ್ದಂತೆ ನಾನು ಬಳಿ ನಿಂತಿದ್ದ ಶಿಷ್ಯನಲ್ಲಿ ಹೇಳಿದೆ– "ಸಾಮಶ್ರವಾ, ಗೋವುಗಳನ್ನು ಕರೆದುಕೊಂಡು ನೀನು ಆಶ್ರಮಕ್ಕೆ ಹೋಗು."

ಬ್ರಾಹ್ಮಣರ ನಡುವೆ ಗೊಂದಲ ಶುರುವಾಯಿತು. ಕೆಲವರಿಗೆ ಆಶ್ಚರ್ಯ. ಇನ್ನು ಕೆಲವರ ಮುಖದಲ್ಲಿ ಅವಜ್ಞೆ. ಎಲ್ಲಿಯದೋ ಬ್ರಾಹ್ಮಣನೊಬ್ಬನ ಸಿಟ್ಟಿನ ಧ್ವನಿ– "ಇಲ್ಲಿ ಸೇರಿದ ಇಷ್ಟು ಮೇಧಾವಿಗಳಲ್ಲಿ ಇವನೊಬ್ಬ ಸರ್ವಶ್ರೇಷ್ಠ ಪಂಡಿತನಂತೆ! ಅಹಂಕಾರಿ!"

ಹೌದು. ಒಂದು ಕ್ಷಣ ಸಂದೇಹ ಬಂದದ್ದು ನಿಜ. ತಪ್ಪಿದೆನೇ? ಲ್ಲರಿಗಿಂತ ನಾನೇ ದೊಡ್ಡ ಜ್ಞಾನಿ ಎಂದು ಹೇಗೆ ಕಂಡಿತು? ಇದು ಉತ್ಕಟ ಶೆ, ಅಹಂಕಾರ ಅಥವಾ ಮೂರ್ಖತನ ಇರಬಹುದೇ? ಕ್ಷಣಮಾತ್ರದಲ್ಲಿ ೇರೆಬೇರೆ ವಿಚಾರಗಳು ಮನಸ್ಸಿನೊಳಗೆ ಹಾದು ಹೋದವು.

ತಟ್ಟನೆ ಜನಕನ ಹೋತ್ರಿ ಮುಂದೆ ಬಂದು ಹೇಳಿದ, "ಯಾಜ್ಞವಲ್ಕ್ಯರೇ, ಂಡಿತವಾಗಿಯೂ ನಮ್ಮ ನಡುವೆ ಇರುವ ಸರ್ವಶ್ರೇಷ್ಠ ವೈದಿಕ ಜ್ಞಾನಿ ೀವು ಹೌದೇನು?"

ಅಶ್ವಾಲ ನನಗೆ ಪರಿಚಯದವನು. ಆದರೆ ಅವನ ಪ್ರಶ್ನೆಯಿಂದ ಪೇಚಿನಲ್ಲಿ ಕ್ಕಿಬಿದ್ದೆ. ಏನು ಹೇಳಲಿ, ಹೇಗೆ ಹೇಳಲಿ? ಎಲ್ಲಾ ದಿಕ್ಕಿನಿಂದ ಬ್ರಾಹ್ಮಣ ಂಡಿತರು ನೋಡುತ್ತಾ ನಿಂತಿದ್ದಾರೆ. ನನ್ನ ಬಾಯಿಯಿಂದ ಹೊರಬೀಳುವ ಾತಿಗಾಗಿ ಕಾಯುತ್ತಿದ್ದಾರೆ. ತಾಳ್ಮೆಯಿಂದ, ಮಾತನ್ನು ಅಳೆದು ಸುರಿದು ುತ್ತರ ನೀಡಬೇಕಾಗಿದೆ. ತುಟಿಯ ಮೇಲೆ ನಗು ತಂದುಕೊಂಡು, ಮ್ರಭಾವದಿಂದ ಹೇಳಿದೆ– "ಅಶ್ವಾಲ, ನಾನು ಎಲ್ಲಾ ಶ್ರೇಷ್ಠ ವೈದಿಕ ಜ್ಞಾನಿಗಳಿಗೆ ಂದಿಸುತ್ತಿದ್ದೇನೆ...ನನಗೆ ಈ ಗೋವುಗಳ ಆವಶ್ಯಕತೆ ಇದೆ."

ಅಶ್ವಲಾನ ಮುಖದಲ್ಲಿ ಅವನ ನಿಶ್ಚಯದ ಲಕ್ಷಣ ಸ್ಪಷ್ಟವಾಯಿತು. ವನ ಬಾಯಿಯಿಂದ ಸತತವಾಗಿ ಪ್ರಶ್ನೆಗಳು ಹೊರಬರಲಾರಂಭಿಸಿದವು. ಾನು ಆ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನೂ ನೀಡಿದೆ. ಪ್ರಶ್ನೋತ್ತರಗಳ ುಧೀರ್ಘ ಪ್ರಕ್ರಿಯೆ ನಡೆಯಿತು. ಆದರೆ ಅಂತ್ಯದಲ್ಲಿ ಬಹುಮಾನ ದೊರೆತದ್ದು ನಗೇ... ಆನಂತರ ಸಾಮ್ರಾಟ್ ಜನಕನ ಸಭೆಯಲ್ಲಿ ಹೆಚ್ಚು ಗೌರವದ ಥಾನ ಸಿಗಲಾರಂಭಿಸಿತು. ನಂತರ ಅವರೊಂದಿಗೆ ಮತ್ತೆ ಮತ್ತೆ ವೇದಾಂತದ ರ್ಚೆ ನಡೆಸುವ ಅವಕಾಶ ದೊರೆಯಿತು. ಅವರನ್ನು ಭೇಟಿಯಾದಾಗಲೆಲ್ಲಾ ಂಭೀರ ಮುಖಮುದ್ರೆಯಲ್ಲಿ ಹಾಸ್ಯಪೂರಿತ ಪ್ರಶ್ನೆಯನ್ನು ಮುಂದಿಡುತ್ತಿದ್ದರು,

"ಏನು ಬೇಕು ಯಾಜ್ಞವಲ್ಕ್ಯರೇ, ವೇದಾಂತದ ಚರ್ಚೆಯೋ ಅಥವಾ ೋವುಗಳು?"

'ಎರಡೂ' ಎಂಬ ಉತ್ತರ ನೀಡಬೇಕೆಂಬ ಆಸೆ ನನಗಾಗುತ್ತಿತ್ತು.

ಯಾಜ್ಞವಲ್ಕ್ಯರಿಗೆ ಎದುರು ದಿಕ್ಕಿನಿಂದ ಯಾರೋ ಉರಿಯುವ
ಸೂಟೆಯಲ್ಲಿ ಬೆಳಕಿನ ದಾರಿ ಮೂಡಿಸುತ್ತಾ ಕತ್ತಲೆಯಲ್ಲಿ ನಡೆದು ಬರುತ್ತಿರುವುದ
ಕಂಡಿತು. ಸೂಟೆಯ ಬೆಳಕಿನಲ್ಲಿ ಆ ವ್ಯಕ್ತಿಯ ಮುಖ ಸರಿಯಾಗಿ ಕಾಣುತ್ತಿರಲಿಲ್ಲ
ಆದರೆ ನಡೆದು ಬರುತ್ತಿರುವವರು ಹೆಂಗಸು ಎಂಬುದು ಮಾತ್ರ ತಿಳಿಯುತ್ತಿತ್ತು
ಅವರ ಹೆಜ್ಜೆ ತಡೆಯಿತು. ಧ್ವನಿ ಹೊರಟಿತು,

"ಯಾರು?"

"ನಾನು" ಧ್ವನಿಯಿಂದ ಅವರು ಕಾತ್ಯಾಯನಿಯನ್ನು ಗುರುತಿಸಿದರು

"ಈ ಕತ್ತಲೆಯಲ್ಲಿ ಎಲ್ಲಿಗೆ ಹೋಗಿದ್ದೆ?"

"ಹಟ್ಟಿಗೆ. ಕೃಷ್ಣ ಇವತ್ತಲ್ಲ ನಾಳೆ ಕರು ಹಾಕಲಿದ್ದಾಳೆ. ಮಲಗುವ
ಮೊದಲು ಹೋಗಿ ನೋಡಿ ಬರೋಣವೆಂದು ಹೋಗಿದ್ದೆ"

"ಸರಿ, ಜಾಗ್ರತೆಯಿಂದ ಹೋಗು, ಆಂ?"

ಕಾತ್ಯಾಯನಿ ಮುಂದೆ ನಡೆದಳು. ಅವಳನ್ನು ನೋಡುತ್ತಿರುವಂತೆ
ಯಾಜ್ಞವಲ್ಕ್ಯರ ಮನಸ್ಸಿನಲ್ಲಿ ಭಾವನೆಗಳ ಅಲೆ ಎದ್ದಿತು.

'ಪಾಪ ಕಾತ್ಯಾಯನಿ! ಮೈತ್ರೇಯಿ ಬಂಜೆಯೆಂದು ಕಾತ್ಯಾಯನಿಯನ್ನು
ಮದುವೆಯಾದೆ. ಆದರೆ ಇವಳು ಕೂಡಾ ಹೆರಲಿಲ್ಲ. ಮಕ್ಕಳ ಯೋಗವಿಲ್ಲ
ಅಷ್ಟೇ. ಆದರೆ ಇವಳು ಅದನ್ನು ಮನಸ್ಸಿಗೆ ಹಚ್ಚಿಕೊಂಡಿರುವ ಹಾಗೆ
ಕಾಣುವುದಿಲ್ಲ. ಸದಾ ನಗುಮೊಗ. ಪ್ರೀತಿ ತುಂಬಿದ ಮನಸ್ಸು. ಮೃದುವಚನ
ಬೆಳಿಗ್ಗೆಯಿಂದ ರಾತ್ರಿಯವರೆಗೆ ಕೆಲಸ ಮಾಡಿಕೊಂಡಿರುತ್ತಾಳೆ. ಅಡುಗೆ
ಮಾಡುವುದು, ಬಟ್ಟೆ ಒಗೆಯುವುದು, ಗೋವುಗಳ ಆರೈಕೆ... ಹೀಗೆ. ಕೆಲಸವೇ
ಕೆಲಸ. ಮಾತಿನಲ್ಲಿಯೂ ಜಾಣೆ. ಆದರೆ ಹೇಳಿಕೊಳ್ಳುವಂತಹ ಬೌದ್ಧಿಕತೆ
ಏನೂ ಇಲ್ಲ.. ಇರಲಿ.'

ಯಾಜ್ಞವಲ್ಕ್ಯರು ಯೋಚಿಸುತ್ತಾ ನಿಂತರು. ಮತ್ತೆ ಅವರ ಮನಸ್ಸಿನಲ್ಲಿ
ವಾನಪ್ರಸ್ಥದ ವಿಚಾರ ಕಾಣಿಸಿಕೊಂಡಿತು...

‘ನಾನು ವಾನಪ್ರಸ್ಥ ಸ್ವೀಕರಿಸುವ ವಿಚಾರ ಕೇಳಿದರೆ ಕಾತ್ಯಾಯನಿಯ ಪ್ರತಿಕ್ರಿಯೆ ಹೇಗಿರಬಹುದು? ಅದು ನಡೆಯುವುದಂತೂ ಖಂಡಿತ. ಅದನ್ನು ತಪ್ಪಿಸುವುದು ಸಾಧ್ಯವೇ? ಇದುವರೆಗೆ ಬಹಳ ಕೆಲಸ ಮಾಡಿದ್ದೇನೆ. ಆದರೆ ಬದುಕಿನಲ್ಲಿ ಇನ್ನೂ ಹೆಚ್ಚು ಮಾಡುವುದಿದೆ. ವೈಶಂಪಾಯನರ ಬಳಿ ಕಲಿತಿದ್ದರಲ್ಲಿ ಸಮಾಧಾನವಿಲ್ಲ. ಅವರು ಕಲಿಸಿದ ಯಜುರ್ವೇದವನ್ನು ಹೃದಯದಿಂದ ಅರ್ಥ ಮಾಡಿಕೊಳ್ಳುವುದು ಸಾಧ್ಯವಾಗಿರಲಿಲ್ಲ. ಆದರೆ ನಾನು ಅವರ ಶಿಷ್ಯ ಮತ್ತು ಸೋದರಳಿಯ ಎರಡೂ ಆಗಿದ್ದ ಕಾರಣ ಹೆಚ್ಚು ವಿರೋಧ ವ್ಯಕ್ತಪಡಿಸುವುದು ಸಾಧ್ಯವಾಗಿರಲಿಲ್ಲ. ಆದರೆ ಆಗಾಗ ಏನೋ ಒಂದು ಘಟಿಸುತ್ತಲೇ ಇತ್ತು.

ಬಹಳ ವರ್ಷಗಳ ಹಿಂದಿನ ಘಟನೆ...ಯಾರೋ ಒಬ್ಬರು ಗುರುವಿನಲ್ಲಿ ಯಜುರ್ವೇದವನ್ನು ಕೇಳಿಸಿಕೊಳ್ಳಲು ತಿಳಿಸಿದ್ದರು. ಆಗ ನಾನು ಅದನ್ನು ಹೇಳಲು ಪ್ರಾರಂಭಿಸಿದೆ. ಗುರುವಿನ ಅಪ್ಪಣೆ ಇಲ್ಲದೆ ವೇದೋಚ್ಚಾರ ಮಾಡಿದೆನೆಂದು, ಅವರು ಇದುವರೆಗೆ ಕಲಿತ ವೇದಪಾಠ ಮರೆತುಹೋಗುವಂತೆ ಶಾಪವಿತ್ತರು. ಇದನ್ನು ಕೇಳಿ ನಿಜವಾಗಿಯೂ ಗೊಂದಲವಾಗಿತ್ತು. ಆದರೆ ಯಜುರ್ವೇದದ ಹೊಸತೊಂದು ಸಂಕಲನವನ್ನು ನಡೆಸುವ ಕಾರ್ಯವನ್ನು ಕೈಗೆತ್ತಿಕೊಂಡೆ.

ಗುರು ಉದ್ಧಾಲಕರ ಬಳಿ ವೇದಾಂತ ಕಲಿಯುವಾಗಲೂ ಮನಸ್ಸಿಗೆ ಸಮಾಧಾನ ಇರುತ್ತಿರಲಿಲ್ಲ. ಮನುಸ್ಮೃತಿಯಲ್ಲಿ ಬಹಳ ಕೊರತೆ ಕಾಣಿಸುತ್ತಿತ್ತು. ಹೆಚ್ಚಿನ ಬದಲಾವಣೆ ತರುವ ಆವಶ್ಯಕತೆ ಇದೆ. ಕಾಲಕ್ಕೆ ತಕ್ಕಂತ ಜ್ಞಾನ ಬೆಳೆಯುತ್ತದೆ. ಜ್ಞಾನಕ್ಕೆ ತಕ್ಕಂತೆ ಮನುಷ್ಯನ ಮತ್ತು ಸಮಾಜದ ವ್ಯವಹಾರವೂ ಬದಲಾಗಬೇಕು. ಅದಕ್ಕಾಗಿ ಈಗ..

“ಒಳಗೆ ಬರುವುದಿಲ್ಲವೇ?” ಕಾತ್ಯಾಯನಿಯ ಧ್ವನಿ ಕೇಳಿಸಿತು.

ಈಗ ಮನೆಯೊಳಗೆ ಪ್ರವೇಶಿಸುವುದಲ್ಲ, ವಾನಪ್ರಸ್ಥ ಸ್ವೀಕರಿಸುವ ಸಮಯ ಬಂದಿದೆ! ಆದರೆ ಅವಳಿಗೆ ಇದನ್ನು ತಿಳಿಸಿ ಹೇಳುವುದು ಹೇಗೆ? ಪತಿ ವಾನಪ್ರಸ್ಥ ಸ್ವೀಕರಿಸಲಿರುವ ವಿಚಾರ ಅವಳಿಗೆ ತಿಳಿದೇ ಇದೆ. ಆದರೆ ಯಾವಾಗ

ಎನ್ನುವುದು ಮಾತ್ರ ತಿಳಿದಿಲ್ಲ. ತಿಳಿದ ನಂತರ ಬಹುತೇಕವಾಗಿ ಅವಳಿಗೆ ಅದು ಇಷ್ಟವಾಗುವ ಸಾಧ್ಯತೆ ಇಲ್ಲ. ಅವಳಲ್ಲಿರುವುದು ಭೌತಿಕ ಆಸಕ್ತಿ. ಆದರೆ ವಿದಾಯ ಹೇಳುವಾಗ ಖಂಡಿತವಾಗಿಯೂ ಅವಳೂ ಹೊರಡುವಳೇ. ವಾನಪ್ರಸ್ಥದ ಭಾವನೆಯಿಂದಲ್ಲ, ಪತ್ನೀಧರ್ಮದ ಹೆಸರಿನಲ್ಲಿ.

"ನಿಮಗೆ ಮಲಗುವ ವೇಳೆ ಆಗಿದೆಯಲ್ಲ?" ಮತ್ತೆ ಅವಳ ಧ್ವನಿ ಕೇಳಿಬಂತು.

"ಸರಿ, ಬರ್ತೀನಿ"

ಯಾಜ್ಞವಲ್ಕ್ಯರು ಮನೆಯೊಳಗೆ ಪ್ರವೇಶಿಸಿದರು. ಅವರು ಒಳಗೆ ಬಂದು ಬಾಗಿಲು ಹಾಕಿಕೊಳ್ಳುವರೆಂಬ ಭಾವನೆಯಿಂದ ಕಾತ್ಯಾಯನಿ ಇನ್ನೊಂದು ಕೋಣೆಗೆ ಹೋದಳು. ಆದರೆ ಅವರು ತೆರೆದ ಬಾಗಿಲಿನತ್ತ ಗಮನವನ್ನು ಹರಿಸಲಿಲ್ಲ. ಅಷ್ಟರಲ್ಲಿ ಮತ್ತೆ ಹೊರಗೆ ಬಂದ ಕಾತ್ಯಾಯನಿ ನೋಡಿದಾಗ ಬಾಗಿಲು ಮುಚ್ಚಿರಲಿಲ್ಲ. ಅವಳು ಆಶ್ಚರ್ಯದಿಂದ ಹೋಗಿ ಬಾಗಿಲು ಮುಚ್ಚಿ ನಸುನಗೆಯಿಂದ ಗಂಡನಿಗೆ ಪ್ರಶ್ನೆ ಮಾಡಿದಳು,

"ಮರೆತೀರೇನು?"

"ಇಲ್ಲ..ನಾನು ಪ್ರತಿಯೊಂದು ಹೆಜ್ಜೆಯನ್ನು ಪ್ರಜ್ಞಾಪೂರ್ವಕವಾಗಿ ಇಡುತ್ತೇನೆ" ಅವರು ಕೂಡಾ ನಗುತ್ತಾ ಉತ್ತರ ನೀಡಿ ಮುಂದೆ ಹೇಳಿದರು, "ಕಾತ್ಯಾಯನಿ, ಒಂದು ಮಹತ್ವದ ವಿಚಾರವನ್ನು ಹೇಳುವುದಿದೆ"

ಹಾಗೆ ಹೇಳುವಷ್ಟರಲ್ಲಿ ಅವಳ ಮುಖದ ಮೇಲೆ ಆ ಮಹತ್ವದ ಸಂಗತಿಯನ್ನು ಕೇಳುವ ಆಸಕ್ತಿ ಮೂಡಿತು. ಯಾಜ್ಞವಲ್ಕರು ಅವಳನ್ನು ಉದ್ದೇಶಿಸಿ ಹೇಳಿದರು, " ಸ್ವಲ್ಪ ಕಾದಿರು. ಮೊದಲು ಮೈತ್ರೇಯಿಯಲ್ಲಿ ಹೋಗಿ ಬರುತ್ತೇನೆ"

ಕಾತ್ಯಾಯನಿ ಯೋಚಿಸಿದಳು, 'ಮೈತ್ರೇಯಿ ಹಿರಿಯ ಹೆಂಡತಿ. ಮತ್ತು ಬೌದ್ಧಿಕತೆಯಲ್ಲಿ ಗಂಡನಿಗೆ ಹೆಚ್ಚು ಹತ್ತಿರದವಳು. ಅವಳ ತಂದೆ ಅವಳಿಗೆ ಉತ್ತಮ ಶಿಕ್ಷಣವನ್ನು ನೀಡಿದ್ದಾರೆ. ಹಾಗಿರುವುದರಿಂದಲೇ ಅವಳ ಬುದ್ಧಿ

ಶಿಕ್ಷಣವಾಗಿ ಇರಬಹುದೇನೋ. ಅವಳಿಗೆ ಗಂಡನೊಡನೆ ಯಾವುದೇ ವಿಚಾರವಲ್ಲಿಯೂ ಚರ್ಚೆ ಮಾಡುವುದು ಸಾಧ್ಯವಿದೆ. ನನ್ನ ತಂದೆ ನನಗೆ ಶಿಕ್ಷಣವನ್ನು ನೀಡಿಲ್ಲ. ಇನ್ನು ನನಗೆ ಬ್ರಹ್ಮವಾದದಲ್ಲಿ ಸ್ವಲ್ಪವೂ ಆಸಕ್ತಿ ಇಲ್ಲ. ಅಲ್ಲಿ ಹೋಗಿ ಕುಳಿತರೆ ಅವರ ತತ್ವಜ್ಞಾನದ ಸಂಭಾಷಣೆಯಲ್ಲಿ ಪಾಲುಗೊಳ್ಳಬೇಕಾಗುತ್ತದೆ. ನನ್ನಲ್ಲಿ ಆ ಸಾಮರ್ಥ್ಯವೂ ಇಲ್ಲ. ಶಿಕ್ಷಣವೂ ಇಲ್ಲ. ಒಣವೇದಾಂತದ ವಿಚಾರ ಕೇಳಿದರೆ ಆಕಳಿಕೆ ಬರುತ್ತದೆ. ಅವರು ಹೋಗಿ ಇಡೀ ರಾತ್ರಿ ಒಣ ಮಾತುಕತೆ ನಡೆಸುತ್ತಾ ಕುಳಿತಿರಲಿ.

ಅವಳು 'ಹುಂ'ಗುಟ್ಟಿದಳು.

ಮೈತ್ರೇಯಿಯ ಬಳಿ ಬಂದ ಯಾಜ್ಞವಲ್ಕ್ಯರು ಹೇಳಿದರು–

"ಮೈತ್ರೇಯಿ ನಿನ್ನ ಬಳಿ ಮಾತನಾಡುವುದಿದೆ."

"ಹುಂ?" ಅವಳಿಗೆ ಆಶ್ಚರ್ಯವೆನಿಸಿತು. ಇದೇನು ವಿಚಿತ್ರ? ಮಾತನಾಡಲು ಇಂತಹ ಭೂಮಿಕೆ ಯಾಕೆ?

"ಮನಸ್ಸಿಗೆ ಶಾಂತಿ ಇಲ್ಲದೆ ಬಹಳ ದಿನಗಳಾದವು"

"ಶಾಂತಿ ಇಲ್ಲವೇ? ಹೀಗೇಕೆ? ಇವತ್ತೇನು ನಡೆಯಿತು?"

"ಇವತ್ತಿನ ಪ್ರಶ್ನೆಯಲ್ಲ. ಬಹಳ ದಿನಗಳಾದವು. ಮನಸ್ಸಿಗೆ ವೃದ್ಧಾಪ್ಯದ ಭಾವನೆ ಮತ್ತೆ ಮತ್ತೆ ಕಾಡುತ್ತಿದೆ. ಕೂದಲು ಹಣ್ಣಾಗಿದೆ. ಚರ್ಮ ಸುಕ್ಕುಗಟ್ಟಿದೆ. ಇನ್ನು ಎಷ್ಟು ದಿನಗಳು ಉಳಿದಿವೆಯೋ ಯಾರಿಗೊತ್ತು?"

"ಏನು ಹೇಳಬೇಕೆಂದುಕೊಂಡಿದ್ದೀರಾ?"

"ಮುಂದಿನ ಆಶ್ರಮ ಕೈಗೊಳ್ಳುವ ಸಮಯ ಬಂದಿದೆ ಎಂದು ಆಲೋಚಿಸುತ್ತಿದ್ದೇನೆ"

"...."

"ನಾನು ಜಗತ್ತಿನಲ್ಲಿ ಒಳ್ಳೇ ಹೆಸರನ್ನು ಸಂಪಾದಿಸಿದ್ದೇನೆ. ನನಗೆ ಕೀರ್ತಿಯೂ ಸಿಕ್ಕಿದೆ. ನನ್ನ ಎಲ್ಲಾ ಭೌತಿಕ ಸಂಪತ್ತಿನ ಮೇಲೆ ನಿನಗೆ ಮತ್ತು

ಕಾತ್ಯಾಯನಿಗೆ ಸಮಾನ ಹಕ್ಕು ಇದೆ. ಆಸ್ತಿಯ ಎರಡು ಭಾಗ ಮಾಡಿ ಅದನ್ನು ನಿಮಗೆ ವಹಿಸಿಕೊಟ್ಟು ನಾನು ಮುಕ್ತನಾಗಬೇಕೆಂದು ಎಣಿಸಿದ್ದೇನೆ"

"ನಾನೊಂದು ಪ್ರಶ್ನೆ ಕೇಳಲೇ?"

"ನೀನು ನನ್ನ ಹೆಂಡತಿ, ಕೇಳು"

"ಈ ಮನೆ, ವಿಶಾಲವಾಗಿರುವ ಈ ತೋಟ ಮತ್ತು ಸಾವಿರಾರು ಗೋವುಗಳನ್ನು ತೆಗೆದುಕೊಂಡು ನಾನು ಏನು ಮಾಡಲಿ?""

"ಇಷ್ಟು ವರ್ಷ ನೀನು ನನ್ನ ಸುಖದಲ್ಲಿ ಪಾಲುಗೊಂಡಿರುವೆ. ಹಾಗೆಯೇ ದುಃಖದಲ್ಲಿಯೂ ಸಾಂಗತ್ಯವನ್ನು ನೀಡಿರುವೆ. ನನ್ನ ಸೇವೆ ಮಾಡಿರುವೆ. ಧರ್ಮದ ಆಚರಣೆಯಲ್ಲಿ ಮಾತ್ರವಲ್ಲ, ವೈಚಾರಿಕ ಜಗತ್ತಿನಲ್ಲಿಯೂ ನೀನು ನನ್ನ ಸಮೀಪವರ್ತಿಯಾಗಿದ್ದಿ. ಮುಂದೆ ನಿನ್ನ ಹತ್ತಿರ ನಾನು ಇಲ್ಲವೆಂಬ ಕಾರಣಕ್ಕಾಗಿ ದುಃಖದಿಂದ ಇರಬೇಡ. ಸುಖವಾಗಿ ಇರು. ನಿನ್ನ ಬದುಕು ದೀರ್ಘವಾಗಿರಲಿ."

"ನನಗೆ ಪೂರ್ವಜನ್ಮದ ಪುಣ್ಯದಿಂದ ನಿಮ್ಮಂತಹ ಪತಿ ದೊರೆತಿದ್ದಾನೆ. ನಾನು ನಿಮ್ಮ ಪತ್ನಿಯಾಗಿ ನನ್ನ ಧರ್ಮವನ್ನು ನಡೆಸಿದ್ದೇನೆ. ಅದು ಆಸ್ತಿಯ ಬಯಕೆಯಿಂದ ಅಲ್ಲ. ಆದರೆ ನನ್ನ ಪ್ರಶ್ನೆಯನ್ನು ನಾನು ಬೇರೆ ರೀತಿಯಿಂದ ಕೇಳುತ್ತೇನೆ"

"ಒಳ್ಳೇದು"

"ಈ ಮನೆ, ಈ ನಂದನವನ ಮತ್ತು ನೀವು ಒಟ್ಟು ಸೇರಿಸಿದ ಸಾವಿರಾರು ಗೋವುಗಳು ಮತ್ತು ಈ ಲೌಕಿಕ ಜಗತ್ತಿನ ಎಲ್ಲಾ ಸುಖ ದೊರೆತರೆ ನನಗೆ ಅಮರತ್ವ ಲಭಿಸುವುದೇನು?"

"ಇಲ್ಲ"

"ಹಾಗಿದ್ದರೆ?"

ಸ್ವಲ್ಪ ಹೊತ್ತು ಯಾಜ್ಞವಲ್ಕರು ಮಾತಿಲ್ಲದೆ ಕುಳಿತರು. ಮೈತ್ರೇಯಿ ಂರಕ್ಷಿತಳು ಮತ್ತು ವಿಚಾರವಂತಳೂ ಹೌದು. ನನ್ನೊಂದಿಗೆ ಯಾವಾಗಲೂ ತ್ವಜ್ಞಾನದ ಚರ್ಚೆಯನ್ನು ನಡೆಸುತ್ತಿದ್ದವಳು. ಅವಳ ಸ್ವಂತ ವಿಚಾರವಿರಲಿ ಥವಾ ಬೇರೆ ಯಾವುದೇ ವಿಚಾರಗಳಿರಲಿ ಅದು ತಾತ್ವಿಕ ಸ್ವರೂಪದ್ದಾಗಿ ುರುವುದನ್ನು ನಾನು ಕೇಳಿಸಿಕೊಂಡಿದ್ದೇನೆ. ಅವಳ ಅಧ್ಯಾತ್ಮಿಕ ವಿಚಾರಗಳ ಡೆಗೆ ನಾನು ಸಾಕಷ್ಟು ಗಮನ ಹರಿಸಿರುವೆನಲ್ಲ. ಜೀವನದ ಕುರಿತು, ತ್ಮಸಾಕ್ಷಾತ್ಕಾರದ ಕುರಿತು ಇವಳು ಎಷ್ಟು ಬೆಳೆದುಬಿಟ್ಟಳೆಂದರೆ, ಯಾವಾಗ ಳೆದಳೆಂಬುದೇ ತಿಳಿಯದಾಗಿ ಹೋಯಿತು. ಮನುಸ್ಮೃತಿಯಲ್ಲಿ ಹೆಣ್ಣಿನ ುರಿತು ಹೇಳಿರುವುದು ಮತ್ತು ಅದಕ್ಕೆ ಸಂಬಂಧಿಸಿದಂತೆ ನನ್ನ ಸಂವೇದನೆಯ ಳೆಯನ್ನು ಹಿಡಿದು ಮನಗಾಣುವುದು ಇವಳಿಗೆ ಸಾಧ್ಯವಾಗಲಿಲ್ಲವೇ?

ಗಾರ್ಗಿ ಜೊತೆ ಸಂವಾದ ನಡೆಸುವಾಗಲೂ ಇದೇ ರೀತಿಯ ಾವನೆಯೊಂದು ಇತ್ತಲ್ಲವೇ? ಜನಕ ಸಾಮ್ರಾಟರು ನಡೆಸಿದ ಆ ಚರ್ಚೆಯಲ್ಲಿ ಾಲುಗೊಳ್ಳಲು ಗಾರ್ಗಿ ಬಂದಿದ್ದಳು. ನನಗೆ ಹೆಚ್ಚು ಪ್ರಶ್ನೆಗಳನ್ನು ಕೇಳಿದವಳು ುವಳೇ. ಅವಳ ಪ್ರಶ್ನೆಗಳು ಬಿಲ್ಲಿನಿಂದ ಬಿಟ್ಟ ಬಾಣದ ಹಾಗೆ ಬಂದೆರಗುತ್ತಿದ್ದವು. ಂದರ ಹಿಂದೆ ಇನ್ನೊಂದು. ನನಗಂತೂ ಸುಸ್ತು ಹೊಡೆದುಹೋಯಿತು. ಮ್ಮೆ ಅವಳಲ್ಲಿ ಹೇಳಿದ್ದೆ ಕೂಡಾ, 'ಗಾರ್ಗೀ, ಹೆಚ್ಚು ಪ್ರಶ್ನೆ ಕೇಳಬೇಡ, ಪ್ರಶ್ನೆ ೀಳಿ ಕೇಳಿ ಕುತ್ತಿಗೆಯ ಮೇಲಿರುವ ನಿನ್ನ ಶಿರ ಹಾರಿಬಿಡಬಹುದು.' ಅದಕ್ಕೂ ುವಳಲ್ಲಿ ಒಂದು ಪ್ರಶ್ನೆ ತಯಾರಾಗಿಯೇ ಇತ್ತು 'ಯಾಕೆ?' ಈಗ ಮೈತ್ರೇಯಿಯ ್ರಶ್ನೆಯನ್ನು ಅರ್ಥ ಮಾಡಿಕೊಳ್ಳುವ ಸಮಯ ಬಂದಿದೆ! ನಾನೆಷ್ಟು ದೊಡ್ಡ ಪ್ಪು ಮಾಡಿದೆ!

ಅವರು ಮೈತ್ರೇಯಿಯ ಕೈಯನ್ನು ಹಿಡಿದುಕೊಂಡರು.

"ಮೈತ್ರೇಯಿ, ನೀನು ಯಾವಾಗಲೂ ನನ್ನ ಪ್ರಿಯಳಾಗಿಯೇ ಇರುವೆ. ಈಗ ಈ ಪ್ರಶ್ನೆಯಿಂದ ಮತ್ತಷ್ಟು ಪ್ರಿಯಳಾಗಿದ್ದೀಯೆ. ನೀನು ಬ್ರಹ್ಮಜ್ಞಾನ ್ಕಾಗಿ ಇಷ್ಟು ಹಸಿದಿರುವುದು ನನಗೆ ಗೊತ್ತೇ ಇರಲಿಲ್ಲ. ಅದಿರಲಿ. ಈಗ ಈ ಜ್ಞಾನಕ್ಕಾಗಿ ನಿನಗೆ ಯಾವುದೇ ಅಡಚಣೆ ಇರಲಾರದು. ಕಿವಿಗೊಟ್ಟು ಕೇಳು..

ಯಾರೂ ಪತಿಗಾಗಿ ಪತಿಯನ್ನು ಪ್ರೀತಿಸುವುದಿಲ್ಲ. ಅದನ್ನು ಅವರು ತಮಗಾಗಿ ಮಾಡುತ್ತಾರೆ. ಪತ್ನಿಗಾಗಿ ಪತ್ನಿಯನ್ನು ಪ್ರೀತಿಸುವುದಿಲ್ಲ, ಅದನ್ನು ಅವರು ತಮಗಾಗಿ ಮಾಡುತ್ತಾರೆ. ಹೆಣ್ಣಿಗಾಗಿ ಮೋಹಗೊಳ್ಳುವುದಲ್ಲ, ತನಗಾಗಿ ಮೋಹಗೊಳ್ಳುವುದಾಗಿದೆ. ಜಗತ್ತಿನ, ದೇವರ, ವೇದದ ಹೀಗೆ ಎಲ್ಲದರ ಕುರಿತಾದ ಪ್ರೀತಿಯು ಅವುಗಳಿಗಾಗಿ ಇರದೆ ಪ್ರಿಯೆ, ಅದು ತಮಗಾಗಿಯೇ ಇರುತ್ತದೆ. ಅದು ತನ್ನ, ಆತ್ಮದ ವಾಸ್ತವಿಕತೆ ಎನ್ನುವುದನ್ನು ತಿಳಿದುಕೋ.."

ಹೀಗೆ ಅವರ ಪ್ರವಚನ ಮುಂದುವರಿಯುತ್ತಾ ಹೋಯಿತು. ಅವಳ ಪ್ರಶ್ನೆಗೆ ಉತ್ತರವನ್ನು ನೀಡುತ್ತ, ಅವಳ ಸಂದೇಹವನ್ನು ಪರಿಹರಿಸುತ್ತಾ ಈ ಸಂವಾದ ಗಂಟೆಗಳ ಕಾಲ ಮುಂದುವರಿಯಿತು. ಕೊನೆಗೆ ಅವಳು ಅವರಲ್ಲಿ ಹೇಳಿದಳು–

"ನೀವು ಇವತ್ತಿನವರೆಗೆ ನನ್ನ ಪತಿಯಾಗಿದ್ದಿರಿ. ಇಂದಿನಿಂದ ಗುರುವಾದಿರಿ."

"ನೀನು ಇವತ್ತಿನವರೆಗೆ ನನ್ನ ಅರ್ಧಾಂಗಿನಿಯಾಗಿದ್ದಿ. ಈಗ ನನಗೆ ನಿನ್ನ ಆತ್ಮದ ದರ್ಶನ ಸಿಕ್ಕಿತು"

ನಂತರ ಅವರು ಎದ್ದು ನಿಂತು ಹೇಳಿದರು.

"ಮೈತ್ರೇಯಿ, ನಾನು ನಾಳೆ ಹೋಗುವವನಿದ್ದೇನೆ. ಇನ್ನು ಎಂದಾದರೂ ನಾವು ಭೇಟಿಯಾಗುವುದಿದ್ದರೆ ಅದು ಪತಿಪತ್ನಿಯರ ಸಂಬಂಧದಲ್ಲಿ ಇರಲಾರದು. ಈ ಅನಂತ ಕಣದ ನಡುವಿನ ಸಂಬಂಧ ನಮ್ಮದಾಗಿರುತ್ತದೆ. ಒಂದೊಂದೇ ಸೂಚನೆ ಕಾಣಿಸುತ್ತಿದೆ. ನಿನ್ನ ಬೌದ್ಧಿಕತೆ, ನಿನ್ನ ಶಿಕ್ಷಣ, ನಿನ್ನ ಬಾಹ್ಯವಾದದ ಲಾಭ ಈ ಮನೆಯೆಂಬ ಆಶ್ರಮದ ಮೂಲಕ ಲೌಕಿಕರಿಗೆ ದೊರೆಯುವಂತಾಗಲಿ."

ಮಲಗಿ ನಿದ್ರಿಸಿದ ಯಾಜ್ಞವಲ್ಕ್ಯರಿಗೆ ಮುಂಜಾನೆ ಕೋಳಿಯ ಮೊದಲ ಕೂಗಿಗೆ ಎಚ್ಚರವಾಯಿತು. ಅವರು ಎದ್ದು ತಣ್ಣೀರಿನಲ್ಲಿ ಸ್ನಾನ ಮಾಡಿ ಎಂದಿನಂತೆ ಪ್ರಾರ್ಥನೆ ಮುಗಿಸಿದರು. ಬೆಳಕು ಮೂಡಿದ ಕೂಡಲೇ ಕಾತ್ಯಾಯನಿಯ ಬಳಿ ಹೋಗಿ ಅವಳಿಗೆ ಹೇಳಿದರು–

"ಬಾ ಇಲ್ಲಿ. ನಿನ್ನೊಡನೆ ಮುಖ್ಯವಾದ ವಿಚಾರ ಹೇಳುವುದಿದೆ"

ಅವಳಿಗೆ ನೆನಪಾಯಿತು–ನಿನ್ನೆ ರಾತ್ರಿ ಯಾವುದೋ ಮಹತ್ವದ ವಿಚಾರ ಹೇಳುವುದಿದೆ ಎಂದು ಹೇಳಿದ್ದರಲ್ಲವೇ

"ಏನದು?"

"ಕಾತ್ಯಾಯನಿ, ನಿನ್ನೆ ರಾತ್ರಿಯೇ ನಿನ್ನಲ್ಲಿ ಹೇಳಬೇಕೆಂದುಕೊಂಡಿದ್ದೆ. ಆದರೆ ಮೈತ್ರೇಯಿ ಬಳಿ ಮಾತನಾಡುತ್ತಾ ಬಹಳ ಸಮಯ ಕಳೆಯಿತು. ಆಮೇಲೆ ಅಂದುಕೊಂಡೆ, ನಿನಗೆ ಬೆಳಿಗ್ಗೆ ಹೇಳೋಣ ಅಂತ"

"...."

"ನನಗೆ ವಯಸ್ಸಾಗಿರುವುದು ನಿನಗೆ ಗೊತ್ತಿದೆ. ವಯಸ್ಸಾದ ಮೇಲೆ ಯಾವುದಾದರೂ ನಿರ್ಧಾರವನ್ನು ಕೈಗೊಳ್ಳಬೇಕಾಗುತ್ತದೆ. ನಾನು ವಾನಪ್ರಸ್ಥ ಸ್ವೀಕರಿಸುವ ನಿರ್ಧಾರ ಕೈಗೊಂಡಿದ್ದೇನೆ."

ಕಾತ್ಯಾಯನಿಗೆ ಕಾಲ ಕೆಳಗಿನ ನೆಲ ಕುಸಿಯುತ್ತಿರುವ ಅನುಭವವಾಯಿತು. ಪ್ರತಿದಿನ ವಾನಪ್ರಸ್ಥ ಸ್ವೀಕರಿಸಿದ ಜೋಗಿಗಳು ಮನೆಬಾಗಿಲಿಗೆ ಬಂದು 'ಭವತಿ ಭಿಕ್ಷಾಂದೇಹಿ' ಎನ್ನುವುದಿತ್ತು. ಈಗ ಅವಳ ಕಣ್ಣೆದುರು ಅವರ ಬಾಡಿದ ಮೊಗ, ಅವರ ಒಣಗಿದ ಕೈಕಾಲುಗಳು ಕಾಣಿಸಿದವು. ಅವರ ನಡುವೆ ಪರಿಚಿತ ಬ್ರಾಹ್ಮಣರು, ತಮ್ಮ ಸಂಬಂಧಿಕರೂ ಇರುತ್ತಿದ್ದರು. ಕೆಲವರನ್ನು ನೋಡುವಾಗ ಮನಸ್ಸಿಗೆ ವ್ಯಥೆಯಾಗುತ್ತಿತ್ತು. ಆದರೆ ಅದನ್ನು ಬ್ರಾಹ್ಮಣ ಬದುಕಿನ ಭಾಗವೆಂದು ತಿಳಿಯಬೇಕಾಗಿತ್ತು. ಆದರೆ ಈಗ ಅವರ ನಡುವೆ ನನ್ನ ಪ್ರಿಯ ಪತಿಯೂ ಇರುವಂತಾಗುತ್ತದೆ! ಇಲ್ಲ, ಇದು ಸಾಧ್ಯವಾಗುವಂತಿಲ್ಲ.

"ಇಲ್ಲ"

ಯಾಜ್ಞವಲ್ಕ್ಯರು ಅವಳ ಮುಖದತ್ತ ದೃಷ್ಟಿ ಬೀರಿದರು, "ನನ್ನ ನಿರ್ಧಾರ ನಿನಗೆ ಅರ್ಥವಾದಂತಿಲ್ಲ. ಇದು ಖಚಿತ."

"ನೀವು ವಾನಪ್ರಸ್ಥವನ್ನು ಯಾಕೆ ಸ್ವೀಕರಿಸುತ್ತೀರಿ ಎನ್ನುವುದನ್ನು ನಾನು ಕೇಳುವುದಿಲ್ಲ. ಆದರೆ ಗೃಹಸ್ಥಾಶ್ರಮವನ್ನು ಇಷ್ಟು ಬೇಗ ಯಾಕೆ ಮುಗಿಸುತ್ತಿದ್ದೀರಿ ಎನ್ನುವುದು ನನಗೆ ತಿಳಿಯುತ್ತಿಲ್ಲ"

"ಬ್ರಾಹ್ಮಣನಾದವನು ಗೃಹಸ್ಥಾಶ್ರಮದ ಬಳಿಕ ವಾನಪ್ರಸ್ಥ ಸ್ವೀಕರಿಸಲೇ ಬೇಕಲ್ಲ? ಅದಕ್ಕನುಗುಣವಾಗಿ ನಿರ್ಧಾರ ಕೈಗೊಂಡರೆ ಏನೀಗ?"

"ಗೃಹಸ್ಥಾಶ್ರದಲ್ಲಿ ಇದ್ದುಕೊಂಡೇ ನೀವು ವೈದಿಕ ವಾಙ್ಮಯದ ಪ್ರಾವಿಣ್ಯವನ್ನು ಪಡೆದಿರುವಿರಲ್ಲ?"

"ಇದುವರೆಗೆ ಕಲಿತಿರುವುದನ್ನು ಮತ್ತು ಅನುಭವಕ್ಕೆ ಬಂದಿರುವುದನ್ನು ಶಿಷ್ಯರಿಗೆ ನೀಡುತ್ತಾ ಬಂದಿರುವೆ. ಅವರೊಂದಿಗೆ ವಿಚಾರ ವಿನಿಮಯ ಮಾಡಿಕೊಳ್ಳುತ್ತಿದ್ದೆ. ಇನ್ನು ಮಾಡಬೇಕಾಗಿರುವುದು ಬಹಳ ಉಳಿದಿದೆ. ಮನುಸ್ಮೃತಿಯ ರಚನೆಯಾಗಿ ಬಹಳ ಸಮಯ ಕಳೆದಿದೆ. ಈಗ ಅದರ ಸುಧಾರಿತ ಸ್ಮೃತಿಯನ್ನು ರಚಿಸಬೇಕಾಗಿದೆ. ಯಜುರ್ವೇದದ ಇನ್ನೊಂದು ರೂಪವನ್ನು ಯೋಜಿಸಲಾಗಿದೆ. ಅದನ್ನು ಮಾಡಬೇಕಾಗಿದೆ. ಇನ್ನೂ ಬಹಳ ಕಾರ್ಯಗಳನ್ನು ನಡೆಸುವುದು ಮನಸ್ಸಿನಲ್ಲಿ ಇದೆ. ಹಲವು ವಿಚಾರಗಳನ್ನು ಲೋಕದ ಮುಂದೆ ಪ್ರಸ್ತುತ ಪಡಿಸುತ್ತಿದ್ದೆನಲ್ಲ, ಇನ್ನು ಮುಂದೆ ಅವುಗಳನ್ನೆಲ್ಲಾ ಗ್ರಂಥರೂಪದಲ್ಲಿ ತರಬೇಕಾಗಿದೆ. ವಾನಪ್ರಸ್ಥ ಎನ್ನುವುದು ಇಂತಹುದೇ ಕಾರ್ಯಗಳಿಗಾಗಿ ಇರುವಂತಹದು. ಈ ನಿಟ್ಟಿನಲ್ಲಿ ಆದಷ್ಟು ಬೇಗ ಹೆಜ್ಜೆ ಇಡುವುದು ಉತ್ತಮವೆಂದು ನನ್ನ ಭಾವನೆ. ಕುರುಡ, ಕಿವುಡನಾದ ಮೇಲೆ ವಾನಪ್ರಸ್ಥ ಸ್ವೀಕರಿಸುವುದರಲ್ಲಿ ಅರ್ಥವಿಲ್ಲ"

ಕಾತ್ಯಾಯನಿಯ ಕಣ್ಣು ತುಂಬಿಬಂತು.

ಪತ್ನಿ ಪುರುಷನ ಸಹಧರ್ಮಿಣಿ ಅಲ್ಲ, ಅವನ ಅರ್ಧಾಂಗಿನಿಯಂತೆ. ಹಾಗಿದ್ದರೆ, ವಾನಪ್ರಸ್ಥಕ್ಕಾಗಿ ಹೊರಟ ಪತಿ ಜೀವನದುದ್ದಕ್ಕೂ ಪ್ರೀತಿಯಿಂದ ತನ್ನ ಸೇವೆಯನ್ನು ಮಾಡಿರುವ ಪತ್ನಿಯ ಗತಿ ಏನಾದೀತು ಎಂದು ಯೋಚಿಸುವುದು ಬೇಡವೇ? ನಾನು ಒಬ್ಬಳೇ ಹೇಗಿರಲಿ?

“ನೀವು ನಿರ್ಧಾರ ತೆಗೆದುಕೊಂಡು ಆಗಿದೆ ಎಂದ ಮೇಲೆ ನಾನೇನು ಹೇಳಲಿ? ನಿಮ್ಮ ಜೊತೆ ನಾನೂ ಬರುತ್ತೇನೆ”

“ಬೇಡ ಕಾತ್ಯಾಯನಿ, ನಿನ್ನೆ ರಾತ್ರಿ ನಾನೊಂದು ನಿರ್ಣಯ ತೆಗೆದುಕೊಂಡಿದ್ದೇನೆ. ಮೈತ್ರೇಯಿಗೂ ಹೇಳಿದ್ದೇನೆ. ನನ್ನ ಸಂಪತ್ತಿಯನ್ನು ಸಮಾನ ರೀತಿಯಿಂದ ಎರಡು ಪಾಲು ಮಾಡಿ ನಿಮಗಿಬ್ಬರಿಗೂ ನೀಡುವವನಿದ್ದೇನೆ. ಆದರೆ ಅವಳು ಬ್ರಹ್ಮವಾದಿನಿ. ಅವಳಿಗೆ ಭೌತಿಕ ವಿಚಾರಗಳ ಸಂಪರ್ಕವೇ ಇಲ್ಲ, ಇನ್ನು ಸಂಪತ್ತಿಯ ಮೇಲಿನ ಆಸಕ್ತಿಯಂತೂ ದೂರವೇ ಉಳಿಯಿತು. ಆದ್ದರಿಂದಲೇ ನನ್ನ ಈ ಸಮಸ್ತ ಆಸ್ತಿ ನಿನ್ನ ಪಾಲಿಗೇ ಬರುತ್ತದೆ. ನೀನಿಲ್ಲಿ ಸುಖವಾಗಿರು!”

“ನೀವು ಕಾಡಿನಲ್ಲಿ ದಿನ ಕಳೆಯುತ್ತಿರುವಾಗ ನಾನು ಇಲ್ಲಿ ಸುಖವಾಗಿ ಇರಬಲ್ಲೆನೇ? ಇಲ್ಲ. ನಿಮ್ಮ ಜೊತೆ ನಾನೂ ಬರುತ್ತೇನೆ. ಎಷ್ಟೋ ಬ್ರಾಹ್ಮಣರು ತಮ್ಮ ಪತ್ನಿಯರೊಂದಿಗೆ ವಾನಪ್ರಸ್ಥಕ್ಕೆ ಹೋಗುತ್ತಾರೆ!”

ಕಾತ್ಯಾಯನಿಯನ್ನು ಬರಸೆಳೆದು ಅವಳ ಕಣ್ಣೀರನ್ನು ಒರಸಿದ ಯಾಜ್ಞವಲ್ಕ್ಯರು ಯೋಚಿಸತೊಡಗಿದರು– ಐಹಿಕ ಸಂಬಂಧಗಳನ್ನು ದೂರ ಸರಿಸಲು ಅನುಕೂಲ ಮಾಡುವ ಪ್ರಶಿಕ್ಷಣ ನೀಡುವಂತಹ ಆಶ್ರಮ ವಾನಪ್ರಸ್ಥ. ಆ ಆಶ್ರಮದಲ್ಲಿ ಪತಿ–ಪತ್ನಿಯರ ಸಂಬಂಧಕ್ಕೆ ಯಾವುದೇ ಅವಕಾಶವಿಲ್ಲ. ಇವಳಿಗೆ ಆತ್ಮದ ಹಾದಿಯಲ್ಲಿ ಯಾವುದೇ ಪಾಲು ಇಲ್ಲ. ಹೀಗಾಗಿ ಇವಳು ‘ಬೇಡ’.

“ಪ್ರತಿಯೊಂದು ವ್ಯಕ್ತಿತ್ವಕ್ಕೆ ಒಂದು ಮೂಲವಿದೆ, ಒಂದು ಪಿಂಡ ಇದೆಯಮ್ಮಾ. ನಿನ್ನ ಪಿಂಡ ಹೃದಯಕ್ಕೆ ಸಂಬಂಧಿಸಿದ್ದು. ನನ್ನದು ಪ್ರಜ್ಞೆಯದು. ನಿನ್ನ ಸ್ಥಾನ ಅಡವಿಯಲ್ಲಿ ಅಲ್ಲ. ಅದು ಇಲ್ಲಿದೆ–ಈ ಮನೆಯಲ್ಲಿ ಇದೆ.”

“ಇಲ್ಲ. ಆಯುಷ್ಯಪೂರ್ತಿ ನಿಮ್ಮ ಸೇವೆ ಮಾಡಿದ ಬಳಿಕ ಈಗ ನಿಮ್ಮನ್ನು ಬಿಟ್ಟು ನಾನು ಇರಲಾರೆ.”

"ಪ್ರಿಯೆ, ವಾನಪ್ರಸ್ಥ ಏನು ಎಂಬುದನ್ನು ನೀನು ಸರಿಯಾಗಿ ಅರ್ಥಮಾಡಿಕೊಂಡಿಲ್ಲ" ಅವರು ಅವಳ ತಲೆಗೂದಲಿನಲ್ಲಿ ಕೈಯಾಡಿಸುತ್ತಾ ಹೇಳತೊಡಗಿದರು–"ವಾನಪ್ರಸ್ಥವನ್ನು ಸ್ವೀಕರಿಸಿದ ಬಳಿಕ ಭೂಮಿ ಉತ್ತು ಬೆಳೆದ ಯಾವುದನ್ನೂ ತಿನ್ನುವ ಹಾಗಿಲ್ಲ. ಬೇಯಿಸಿದ ಆಹಾರ, ಜೇನು, ಮಾಂಸ, ಅಣಬೆ ಎಲ್ಲವೂ ನಿಶಿದ್ಧ. ನೆಲೆಸಲು ಮನೆಯ ಅಪೇಕ್ಷೆಯನ್ನು ಇಟ್ಟುಕೊಳ್ಳುವ ಹಾಗಿಲ್ಲ. ಮರಗಳ ಕೆಳಗೆ ಮಲಗಬೇಕಾಗುತ್ತದೆ. ದೇಹದ ಮೇಲೆ ಬೇಸಿಗೆಯ ಬಿಸಿಲು ಮತ್ತು ಮಳೆಗಾಲದ ಮಳೆಯನ್ನು ಸ್ವೀಕರಿಸಿ ಚಳಿಗಾಲದಲ್ಲಿ ಒದ್ದೆ ಬಟ್ಟೆಯುಟ್ಟು ಇಂದ್ರಿಯ ನಿಗ್ರಹವನ್ನು ಪಡೆಯಬೇಕಾಗುತ್ತದೆ. ನನಗಾಗಿ ಹೊರಟು ಬಂದು ನೀನು ಈ ತೊಂದರೆಗಳನ್ನು ಅನುಭವಿಸುವುದು ಬೇಕಿಲ್ಲ. ಅಂತಹ ಬದುಕು ನಿನಗೆ ಬೇಡ.."

ಪವಿತ್ರ ಅಗ್ನಿ ಮತ್ತು ಯಜ್ಞದ ಸಾಮಾಗ್ರಿಯನ್ನು ಒಟ್ಟುಗೂಡಿಸುತ್ತಾ ಅವರು ಹೇಳಿದರು, "ತಕ್ಷಣವೇ ನಾನು ಬದುಕನ್ನೇ ಬಿಟ್ಟು ಹೋಗುವೆನೆಂದು ನೀನು ತಿಳಿಯುವುದು ಬೇಡ. ವಾನಪ್ರಸ್ಥವೆನ್ನುವುದು ಇದೇ ಬದುಕಿನ ಇನ್ನೊಂದು ಆಶ್ರಮ ಅಷ್ಟೇ. ನಾವು ಪರಸ್ಪರ ಭೇಟಿಯಾಗುತ್ತಿರಬಹುದು. ಆದರೆ ಪತಿಪತ್ನಿಯರಾಗಿ ಮಾತ್ರ ಅಲ್ಲ. ಆಗ ನಮ್ಮ ನಡುವೆ ಪುರುಷ-ಸ್ತ್ರೀಯ ಮತ್ತು ವಯಸ್ಸಿನ ಅಂತರವಿರುವುದಿಲ್ಲ.."

ದುಃಖದಿಂದ ಮಂಜಾಗಿರುವ ಅವಳ ಕಣ್ಣುಗಳಿಗೆ ಅವರು ಯಾವಾಗ ಹೊರಟುಹೋದರೆನ್ನುವುದು ತಿಳಿಯಲೇ ಇಲ್ಲ.



# ಏನು ಹೇಳುತ್ತಿದ್ದಾಳೆ ತುಳಸಿ?

ಹೊರಗೆ ಶ್ರಾವಣದ ಮಳೆ ಸುರಿಯುತ್ತಿದೆ. ಹಠ ಹಿಡಿದು ಒಂದೇ ಸ್ವರದಲ್ಲಿ ಅಳುತ್ತಿರುವ ಮಕ್ಕಳ ಹಾಗೆ. ತೆಲುಧಾರೆಯಲ್ಲಿ ಬೀಳುತ್ತಿರುವ ಮಳೆಯನ್ನು ನೋಡುತ್ತಿದ್ದಂತೆ ಹೊರಗೆ ಹೋಗುವ ಮನಸ್ಸಾಯಿತು. ಇಡೀ ದಿನ ಮನೆಯಲ್ಲಿ ಇದ್ದು ಈಗ ತೆರೆದ ಗಾಳಿಗೆ ಮೈಯೊಡ್ಡಿಕೊಳ್ಳಬೇಕೆನಿಸಿತು.

ಬಟ್ಟೆ ಬದಲಾಯಿಸುವಾಗ ಅಮ್ಮ ಕೇಳಿದಳು,

"ಎಲ್ಲಿಗೆ, ಹೊರಗೆ ಹೋಗ್ತಾ ಇದ್ದಿಯಾ?"

"ಹುಂ"

"ಹಾಗೇ ಭಟ್ರ ಮನೆಗೆ ಹೋಗಿ ಅವರಿಗೆ ನಾಳೆ ಬೆಳಿಗ್ಗೆ ಬರುವುದನ್ನು ನೆನಪು ಮಾಡು."

ನಾಳೆ ಅಪ್ಪನ ವಾರ್ಷಿಕ ಶ್ರಾದ್ಧ. ಮೊನ್ನೆ ಅಮ್ಮ ಫೋನಿನಲ್ಲಿ ಮಾತನಾಡುವಾಗ ಅದನ್ನು ತಿಳಿಸಿದ್ದಳು. ಇತ್ತೀಚಿಗೆ ಅವಳ ಕರೆಗಳು ಬರುತ್ತಾ ಇರುತ್ತವೆ. ಎಲ್ಲರ ಯೋಗಕ್ಷೇಮ ವಿಚಾರಿಸಿದ ಬಳಿಕ ಅವಳು ನೆನಪಿಸುತ್ತಾಳೆ, ಬರುವ ಇಪ್ಪತ್ತೆಂಟಕ್ಕೆ ನಾಗರ ಪಂಚಮಿ. ಸಾಧ್ಯವಿದ್ದರೆ ಬಾ. ಇಲ್ಲದಿದ್ದರೆ ಗೋಕುಲಾಷ್ಟಮಿಗಂತೂ ಖಂಡಿತಾ ಬಾ..ದೇವಸ್ಥಾನದ ಜಾತ್ರೆಗೆ ಇನ್ನು ಹನ್ನೆರಡೇ ದಿನಗಳು ಉಳಿದಿವೆ. ಯಾವಾಗ ಬರ್ತಿಯಾ? ಬರುವಾಗ ಹೆಂಡತಿ, ಮಕ್ಕಳನ್ನು ಕೂಡಾ ಕರೆದುಕೊಂಡು ಬಾ..ಎಲ್ಲರೂ ಒಟ್ಟಿಗೆ ಸೇರೋಣ..

ಹೀಗೆ ಅವಳು ತಮ್ಮನಿಗೂ, ತಂಗಿಗೂ ಕೂಡಾ ಹೇಳುತ್ತಾಳೆ. ಇಂತಿಂತಹ ದಿನಗಳಲ್ಲಿ ಬನ್ನಿ ಎಂದುಕೊಂಡು. ಅವಳದೇ ಆದ ಹೂಭಾಷೆಯಲ್ಲಿ ಎಲ್ಲರನ್ನೂ ಒಂದೇ ಹೊತ್ತಿನಲ್ಲಿ, ಒಂದೇ ಸೂರಿನ ಕೆಳಗೆ ಬರಮಾಡಿಕೊಳ್ಳುತ್ತಾಳೆ.

"ಭಟ್ಟರಿಗೆ ನಾಲ್ಕೈದು ದಿನಗಳ ಹಿಂದೆಯೇ ಹೇಳಿಯಾಗಿದೆ. ಆದರೆ ವಯಸ್ಸಾಗಿದೆಯಲ್ಲ, ನೆನಪಿರಲಿಕ್ಕಿಲ್ಲ" ಅವಳು ಹೇಳಿದಳು.

"ನಾಳೆಗಾಗಿ ಏನಾದರೂ ತರಬೇಕಿತ್ತಾ?"

"ಬೇಡ. ಎಲ್ಲವನ್ನು ಭಟ್ರೇ ತರುತ್ತಾರೆ. ನೀನು ಅವರಿಗೆ ಬೆಳಿಗ್ಗೆ ಬರಲಿಕ್ಕೆ ಹೇಳು"

"ಆಯ್ತು"

ಕೊಡೆ ಬಿಡಿಸಿ ಮನೆಯಿಂದ ಹೊರಗೆ ಕಾಲಿಟ್ಟೆ. ಸ್ವಲ್ಪ ಮುಂದೆ ಅಡ್ಡರಸ್ತೆ ಸಿಕ್ಕಿತು. ಸುಮಾರು ಒಂದೂವರೆ ಕಿಲೋಮೀಟರ್ ಉದ್ದದ ರಸ್ತೆ. ಅದು ಪಶ್ಚಿಮದಲ್ಲಿ ಸಮುದ್ರತೀರದ ಕಡೆಗೆ ಸಾಗಿದರೆ, ಪೂರ್ವ ದಿಕ್ಕಿನಲ್ಲಿ ರಾಜನ ಹಳೆ ಅರಮನೆಯನ್ನು ಬಂದು ತಲುಪುತ್ತದೆ. ನಿಂತಲ್ಲಿಂದ ದಕ್ಷಿಣಕ್ಕೆ ಹೆಜ್ಜೆ ಹಾಕಿದರೆ ದೇವಸ್ಥಾನಕ್ಕೆ ಹೋಗಿ ಮುಟ್ಟುತ್ತೇನೆ. ಎಲ್ಲಿಗೆ ಹೋಗಲಿ? ಮೊದಲು ಭಟ್ರ ಮನೆಗೆ ಹೋಗಿ ನಾಳೆಯ ಶ್ರಾದ್ಧದ ನೆನಪು ಮಾಡಿ ಬರೋಣ.

ರಸ್ತೆಯ ಎರಡೂ ಬದಿಗಳಲ್ಲಿ ಅಂಗಡಿಗಳ ಸಾಲು. ಹಿಂದೆ ಬಹಳ ಸಲ ಬಂದ ವಿಚಾರ ಮತ್ತೆ ಮನಸ್ಸಿಗೆ ಬಂತು. ಅಂಗಡಿಗಳ ಸಾಲು ಬಹಳ ಹೆಚ್ಚಾಗಿದೆ. ಮೊದಲು ತರಕಾರಿ, ಹಣ್ಣು, ಔಷಧಿ ಗುಳಿಗೆ ಬೇಕಾಗಿದ್ದರೆ ಅರ್ಧ ಕಿಲೋಮೀಟರ್ ದೂರ ಹೋಗಬೇಕಾಗಿತ್ತು. ಈಗ ಎಲ್ಲವೂ ಹತ್ತಿರದಲ್ಲೇ ಸಿಗುತ್ತವೆ. ಹಳೆ ಅಂಗಡಿಗಳನ್ನು ಕೆಡವಿ ಹೊಸ ಕಟ್ಟಡಗಳನ್ನು ಕಟ್ಟಿದ್ದಾರೆ. ಹೊಸ ಬ್ಯಾಂಕ್ ಶಾಖೆಯನ್ನು ತೆರೆಯಲಾಗಿದೆ. ಏರ್‌ಟೆಲ್ ಮತ್ತು ವೊಡಫೋನುಗಳ ರಿಚಾರ್ಜ್ ಕೂಪನಗಳ ಮಾರಾಟದ ಸೈನ್ ಬೋರ್ಡ್ ಕಾಣಿಸುತ್ತಿದೆ. ಕಾಲಕ್ಕನುಗುಣವಾಗಿ ನನ್ನ ಊರು ಕೂಡಾ ಬದಲಾಗುತ್ತಿದೆ.

ಏರ್‌ಟೇಲ್ ರಿಚಾರ್ಜ್ ಕೂಪನ್ ಮಾರುವ ಅಂಗಡಿಯನ್ನು ಹಾದು ಮುಂದೆ ಹೆಜ್ಜೆ ಇಟ್ಟಾಗ ಅದರ ಜಗಲಿಯ ಕಡೆಯಿಂದ ಯಾರೋ ಕೆಳಧ್ವನಿಯಲ್ಲಿ ಹಾಡುತ್ತಿರುವುದು ಕೇಳಿಬಂತು.

ಅಲ್ಲೆಂ ಬಾಯಿ ಅಲ್ಲೆಂ
ದೊನ್ ಪೊಡಾಚೆಂ, ತೀನ್ ಪೊಡಾಚೆಂ ಪಾಳ್ಳೆಂ
ಮ್ಹಗೆ ಭಾವು ಸಾಸಪ್ಪಿ ಗೆಲಾ
ಥಾಂಗ ಜಾಲೆಂ ಫಾಲೆಂ 1

ಬಹಳ ವರ್ಷಗಳ ಹಿಂದೆ ಮನೆಗೆಲಸದ ಕುಣಬಿ ಈ ಪದ ಹಾಡುತ್ತಿದ್ದುದು ನೆನಪಿಗೆ ಬಂತು. ಅದು ಫೋನಿನ ಕರೆಧ್ವನಿಯಲ್ಲಿ ಸೇರಿಕೊಂಡಿರಬಹುದೇ? ಮಳೆಯ ಸದ್ದಿನಲ್ಲಿ ಒದ್ದೆಯಾದ ಆ ಕ್ಷೀಣ ಧ್ವನಿಯನ್ನು ಅನುಸರಿಸಿ ಹಿಂದೆ ತಿರುಗಿ ನೋಡಿದೆ. ಅಂಗಡಿಯ ಜಗಲಿಯ ಮೂಲೆಯಲ್ಲಿ ಒಬ್ಬ ಮುದಿ ಹೆಂಗಸು ಒಂಟಿಯಾಗಿ ಕುಳಿತಿದ್ದಾಳೆ. ಅವಳ ನೋಟ ಮಳೆಯನ್ನು ಸೀಳಿ ದೂರ ಎಲ್ಲೋ ಸಾಗಿದೆ. ಆ ದೂರಪ್ರದೇಶದ ಯಾವುದೋ ಅದೃಶ್ಯ ವ್ಯಕ್ತಿಯನ್ನು ಉದ್ದೇಶಿಸಿ ಅವಳು ಈ ಪದ ಹಾಡುತ್ತಿದ್ದಾಳೆ.

ಸಾಸಸ್ಟಿ ಗೆಲೊಲೊ, ಭಾವು, ಕಿತೆಂ ಹಾಳ್ಳಲೆಂ?
ಸಾಸಷ್ಟಿಚಿಂ ಮಡಲಾಂ ಹಾಡೂನ್
ಕವಾಡೊ ಬಾಂದಿಲೊ.
ಕವಾಡೊ ಬಾಂದಿಲೊ, ದಿವ್ರೊ ಮಾಂಡಯಲೊ,
ಘರಾಂತಲೆ ವ್ಹೊನಯೆ ತುಕಾ
ದೇರು ಮಾನವಲೊ.2

ಅವಳ ಮುಖದಲ್ಲಿ ವಿನೋದದ ನಗು ಮೂಡಿಬಂತು. ಪುಟ್ಟ ಮುಖ. ಗುಳಿಬಿದ್ದ ಕಣ್ಣುಗಳು. ಹಲ್ಲುಗಳೆಲ್ಲಾ ಉದುರಿ ಒಳಸೇರಿದ ಬೊಚ್ಚುಬಾಯಿ. ಕೈಕಾಲು ಮುರುಟಿರುವಂತೆ ಕಂಡಿತು. ಕಪ್ಪು ತೆಳುದೇಹದ ಅವಳು ಕುಣಬಿಯೇ. ಅದು ಅವಳ ಆ ಹಾಡಿನಿಂದ ಮತ್ತು ಉಡುಪು ಧರಿಸಿದ ರೀತಿಯಿಂದಲೇ ಸ್ಪಷ್ಟವಾಯಿತು. ಅವಳುಟ್ಟ ಬಟ್ಟೆ ಹಳೆಯದಾಗಿ ಮಾಸಿತ್ತು. ಅದರ ಅಸಲಿ ಬಣ್ಣ ಯಾವುದೆಂದು ತಿಳಿದುಕೊಳ್ಳುವ ಹಾಗಿರಲಿಲ್ಲ. ಸೀರೆಯನ್ನು ಎದೆಯ ಮೇಲೆ ತಂದು ಗಂಟು ಹಾಕಿ ಉಟ್ಟಿದ್ದಾಳೆ. ವಯಸ್ಸು ಸುಮಾರು ಎಪ್ಪತ್ತು, ಎಪ್ಪತ್ತೈದು ಆಗಿರಬಹುದೆಂದು ಕಾಣುತ್ತದೆ.

ನಾನು ಅವಳನ್ನು ಮೊದಲ ಬಾರಿ ನೋಡಿದ್ದು ನಿನ್ನೆ, ಬಸ್‌ಸ್ಟಾಂಡಿನಿಂದ ಬರುವ ದಾರಿಯಲ್ಲಿ. ಆಗ ರಸ್ತೆಯಲ್ಲಿ ಜನಸಂಚಾರ ಹೆಚ್ಚು ಇರಲಿಲ್ಲ. ಬೆಳಿಗ್ಗೆ ಸ್ನಾನ ಮಾಡಿ ದೇವಸ್ಥಾನಕ್ಕೆ ಹೋಗುವವರು, ಮನೆಮನೆಗೆ ಹಾಲು ಮತ್ತು ಪತ್ರಿಕೆಗಳನ್ನು ತಲುಪಿಸುವ ಹುಡುಗರ ಸೈಕಲ್‌ಗಳು, ಶಾಲಾ ಯೂನಿಫಾರ್ಮ್

ಧರಿಸಿ ಟ್ಯೂಶನಿಗೆ ಹೋಗುವ ಮಕ್ಕಳು..ಎಲ್ಲರೂ ತಮ್ಮ ತಮ್ಮ ದಾರಿ ಹಿಡಿದು ಹೋಗುವ ಮಂದಿ. ಅವಳು ಅಂಗಡಿ ಮುಂದಿನ ಜಗಲಿಯ ಮೇಲೆ ಕುಳಿತು ಏನೋ ಗುಣಗುಣಿಸುತಿದ್ದಳು. ಅವಳು ಉಚ್ಚರಿಸುತ್ತಿದ್ದ ಅಸ್ಪಷ್ಟ ಶಬ್ದಗಳಿಗಿಂತಲೂ ಅವಳ ಹಾವಭಾವ ನನ್ನ ಗಮನ ಸೆಳೆದಿತ್ತು. ಏನನ್ನೋ ಹಿಡಿದುಕೊಂಡಿರುವ ಹಾಗೆ ಅವಳು ಕೈಗಳನ್ನು ಅಲ್ಲಾಡಿಸುತ್ತಿದ್ದಳು. ಎರಡೂ ಕೈಗಳನ್ನು ಚಾಚಿ ಯಾರೂ ಭಿಕ್ಷೆ ಬೇಡುವುದಿಲ್ಲ. ಅವಳ ಹಾವಭಾವ ನೋಡಿದರೆ ಹುಚ್ಚಿಯ ಹಾಗೆ ಕಾಣುತ್ತಾಳೆ. ಅವಳ ಕೈಯಲ್ಲಿ ಏನಿರಬಹುದೆಂದು ನೋಡಿದರೆ ಅಲ್ಲಿ ಏನೂ ಕಾಣಿಸಲಿಲ್ಲ. ಹಾಗಿದ್ದರೆ ತನ್ನ ಸೀರೆಯ ಅದೃಶ್ಯ ಪದರಿನಿಂದ ಗಾಳಿ ಹಾಕುತ್ತಿರಬೇಕು ಎಂದುಕೊಂಡೆ. ಆಮೇಲೆ ಕಂಡಿತು. ಅದು ಹಾಗಲ್ಲ. ಅವಳು ಎರಡೂ ಕೈಗಳಿಂದ ಮೊರ ಹಿಡಿದು ಅಕ್ಕಿಯನ್ನೋ ಬೇರೆ ಏನನ್ನೋ ಆರಿಸುತ್ತಿರಬೇಕು.

ಮೊದಲಿನಿಂದಲೂ ಹೀಗೆ ತಲೆ ಕೆಟ್ಟ ಜನ ಊರಿನಲ್ಲಿ ಕಾಣಿಸಿಕೊಳ್ಳುತ್ತಿದ್ದುದು ಅಪರೂಪವೇನಲ್ಲ. ಅದರಲ್ಲಿ ಗಂಡಸರು ಮತ್ತು ಹೆಂಗಸರು, ತರುಣರು ಮತ್ತು ವಯಸ್ಸಾದವರು ಎಲ್ಲರೂ ಇರುತ್ತಿದ್ದರು. ಅವರ ಹತ್ತಿರದಿಂದ ಹೋಗುವಾಗ ಚಡಪಡಿಕೆ, ನಿಂದೆ, ಮಜಾ, ಭ್ರಾಂತಿ ಹೀಗೇ ಏನೇನೋ ನಡೆಯುತ್ತಿತ್ತು. ನಿನ್ನೆ ಆ ಕುಣಬಿ ಅದೃಶ್ಯ ಮೊರ ಹಿಡಿದು ಅಕ್ಕಿ ಆರಿಸಲು ಕುಳಿತಿರುವುದನ್ನು ನೋಡಿದಾಗಲೂ ಹೀಗೇ ಏನೋ ಭಾವನೆ ಕಾಡಿತ್ತು.

ಬೆಳಿಗ್ಗಿನ ಹೊತ್ತು ಭಟ್ರು ಬಂದು ತಲುಪಿದರು. ಅವರ ಮಂತ್ರದ ಉಚ್ಚಾರಣ ಮತ್ತು ಶ್ರದ್ಧೆಯ ವಿಧಿವಿಧಾನಗಳು ಬಹಳ ಇದ್ದುದರಿಂದ ನಡುನಡುವೆ ನನಗೆ ತಂದೆಯವರ ನೆನಪು ಬರತೊಡಗಿತು. ಅವರು ಕೂಡಾ ಗೋಕುಲಾಷ್ಟಮಿ ಮತ್ತು ಮಹಾನವಮಿಯ ದಿನಗಳಲ್ಲಿ ಮಂತ್ರೋಚ್ಚಾರದೊಂದಿಗೆ ಪೂಜೆ ನಡೆಸುತ್ತಿದ್ದರು. ನನ್ನೆದುರು ಅವರ ಮುಖದ ಮಂದಹಾಸ ಕಂಡಿತು. ಅವರ ಮಾತು ಕೇಳಿಸತೊಡಗಿತು. ಎಷ್ಟೋ ವರ್ಷಗಳವರೆಗೆ ನನ್ನನ್ನು ಸಮಯಕ್ಕೆ ಸರಿಯಾಗಿ ಅವರು ಶಾಲೆಗೆ ಕರೆದುಕೊಂಡು ಹೋಗುತ್ತಿದ್ದುದು ನೆನಪಾಯಿತು. ಮನೆಯವರ ಫೋಟೋ ತೆಗೆಯಲು ಫೊಟೋಗ್ರಾಫರ್ ಬರುವನೆಂದು ಅವರು ತಿಳಿಸಿದಾಗ ನಾನು ಉಮೇದಿನಿಂದ ಕಾದು ಕುಳಿತದ್ದು ನೆನಪಿಗೆ ಬರುತ್ತದೆ.

ಅವರು ಕಲಿತದ್ದು ಎಂಟನೇ ತರಗತಿಯವರೆಗೆ ಮಾತ್ರ. ಆದರೆ ತನ್ನ ಪ್ರಾಮಾಣಿಕತೆ ಮತ್ತು ಕಠಿಣ ಪರಿಶ್ರಮದಿಂದ ಕಂಪೆನಿಯೊಂದರ ಪಾಲುದಾರನಾಗುವ ಹಂತ ತಲುಪಿದೆನೆಂದು ಅಭಿಮಾನ ಪಡುತ್ತಿದ್ದರು. ಸ್ವತಃ ಹೆಚ್ಚು ಕಲಿಯದಿದ್ದರೂ ಅವರು ಕಲಿಯಲು ನೀಡುತ್ತಿದ್ದ ಬೆಂಬಲವನ್ನು ನೆನೆದು ಮನಸ್ಸು ಯಾವಾಗಲೂ ಭಾರವಾಗುತ್ತಿತ್ತು. ಎಷ್ಟೋ ವರ್ಷಗಳ ಹಿಂದೆ ನನ್ನನ್ನು ಕಾಲೇಜಿಗೆ ಸೇರಿಸಲು ಬಂದಾಗ ಅವರು ಪ್ರಿನ್ಸಿಪಾಲರ ಮುಂದೆ ಆದರಪೂರ್ವಕವಾಗಿ ಆದರೆ ತನ್ನ ಮಟ್ಟವನ್ನು ಕಾಯ್ದು ಉಳಿಸಿಕೊಂಡದ್ದನ್ನು ನೋಡಿ ನನಗೆ ಆಶ್ಚರ್ಯವಾಗಿತ್ತು.

ಶ್ರದ್ಧೆಯ ವಿಧಿ ನಡೆಯುತ್ತಿರುವಾಗ ಭಟ್ರು ನನಗೆ ಮುಂದೆ ಇರಿಸಿದ ಪಿಂಡವನ್ನು ಕೈಯಿಂದ ಸ್ಪರ್ಶಿಸಿ ಅದರ ಮೇಲೆ ನೀರು ಬಿಡುವಂತೆ ತಿಳಿಸಿದಾಗ ನನ್ನ ಮನಸ್ಸಿನಲ್ಲಿ ತಂದೆಯವರ ದೊಡ್ಡ ಮೂಗಿನ ನಗುಮೊಗ ತುಂಬಿ ಬಂತಿತು. ಈ ಎಲ್ಲಾ ವಿಧಿಗಳು ಅವರಿಗೆ ನೀಡುವ ಅರ್ಘ್ಯವಾಗಿರುವುದರಿಂದ ಅದು ನನಗೆ ಹೆಚ್ಚು ಸೇರುತ್ತದೆ.

ಪಿಂಡದಾನದ ನಂತರ ಕಾಗೆಗಳಿಗೆ ಬಾಳೆಲೆ ಇಡುವಂತೆ ಅವರು ಸೂಚಿಸಿದರು. ನಾನು ಬಾಳೆಲೆ ತೆಗೆದುಕೊಂಡು ಅಂಗಳದ ಮೂಲೆಯೊಂದರಲ್ಲಿ ಇಟ್ಟು 'ಕಾ ಕಾ' ಎಂದು ಕಾಗೆಗಳಿಗೆ ಕರೆದೆ. ಅವು ಕಣ್ಣಿಗೆ ಕಾಣಿಸಿದ ಕೂಡಲೇ ಮನೆಯೊಳಗೆ ಬಂದೆ.

ಉಳಿದ ಪಿಂಡ, ಅದರ ಮೇಲಿದ್ದ ದರ್ಭೆ ಮತ್ತು ಇತರ ವಸ್ತುಗಳನ್ನು ಹಗಲಿಗೆ ಹಾಕಿದ ಒದ್ದೆ ಅಂಗವಸ್ತ್ರದಲ್ಲಿ ಕಟ್ಟಿ ದೇವಸ್ಥಾನದ ಕೆರೆಯಲ್ಲಿ ವಿಸರ್ಜಿಸಲು ಸಿದ್ಧವಾಗಿಟ್ಟೆ. ಅಮ್ಮನನ್ನು ಕರೆದು ಭಟ್ಟರಿಗೆ ಉಪಹಾರ ನೀಡುವಂತೆ ತಿಳಿಸಿದೆ. ಅವಳ ಕಣ್ಣು ಕೆಂಪಾಗಿರುವುದನ್ನು ಗಮನಿಸಿದಾಗ ತಂದೆಯ ನೆನಪಿನಿಂದ ದುಃಖ ಪಟ್ಟುಕೊಂಡಿರಬೇಕೆನಿಸಿತು.

"ನಾನು ಪಿಂಡ ಕೆರೆಗೆ ಹಾಕಿ ಬರ್ತೀನೆ. ನೀವು ಉಪಹಾರ ಸೇವಿಸಿ" ಎಂದು ಭಟ್ಟರಿಗೆ ತಿಳಿಸಿದೆ.

ಗಂಟೆ ಎಂಟು. ಶ್ರಾವಣದ ಎಳೆಬಿಸಿಲು ಫಳಫಳನೆ ಹೊಳೆಯುತ್ತಿದೆ
ನಿನ್ನೆ ಸುರಿದ ಮಳೆಯ ನೀರು ರಸ್ತೆಯ ಹೊಂಡಗಳಲ್ಲಿ ಶೇಖರವಾಗಿ ನಿಂತಿದೆ
ಆಗಸ ನೀಲಿ ಬಣ್ಣದ್ದಾಗಿದೆ. ಶಾಲೆಯ ಮಕ್ಕಳನ್ನು ತುಂಬಿಸಿದ ಆಟೋರೀಕ್ಷಾಗಳು
ಓಡುತ್ತಿವೆ. ಹೂ ಮಾರುವ, ನಿಯತಕಾಲಿಕೆ ಮತ್ತು ಪತ್ರಿಕೆಗಳನ್ನು ಮಾರುವ
ಅಂಗಡಿಗಳು ತೆರೆದಿವೆ. ಫಲಾಹರ ಗೃಹಗಳು ಮತ್ತು ದಿನಸಿ ಅಂಗಡಿಗಳು
ಕೂಡಾ ವ್ಯಾಪಾರ ಪ್ರಾರಂಭಿಸಿವೆ. ಬಟ್ಟೆ ಅಂಗಡಿಗಳು ಮತ್ತು ಶೋರೂಮ್‌ಗಳು
ಮಾತ್ರ ತೆರೆಯಲು ಇನ್ನಷ್ಟು ಸಮಯವಿದೆ.

ದಾರಿಯಲ್ಲಿ ನಡೆದು ಹೋಗುತ್ತಿರಬೇಕಾದರೆ ಒಂದು ಆಟೋರಿಕ್ಷಾ
ಬಂದು ನನ್ನ ಹತ್ತಿರ ನಿಂತಿತು. ರಿಕ್ಷಾದಿಂದ ತಲೆ ಹೊರಗೆ ಹಾಕಿದ ದಿನು
ನನಗೆ 'ಹಲೋ' ಎಂದ. ಶಾಲೆಯಲ್ಲಿ ನನ್ನ ಜೊತೆ ಓದಿಕೊಂಡಿದ್ದವ.

"ಯಾವಾಗ ಬಂದೆಯೋ?" ಅವನು ವಿಚಾರಿಸಿದ.

"ನಿನ್ನೆ. ಹೇಗಿದ್ದಿ?"

"ದೇವರ ದಯೆಯಿಂದ ಚೆನ್ನಾಗಿದ್ದೇನೆ. ಇವತ್ತು ನಿನ್ನ ತಂದೆಯವರ
ಶ್ರಾದ್ಧವೆಂದು ಕಾಣುತ್ತೆ"

"ಹೌದು"

"ಕೆರೆಗೆ ಪಿಂಡ ಹಾಕಲು ಹೋಗುತ್ತಿರುವ ಹಾಗಿದೆ. ಬಾ, ಹತ್ತು ಮೇಲೆ"
ಅವನು ಮಕ್ಕಳನ್ನು ಹಿಂದೆ ಸರಿಯುವಂತೆ ಹೇಳಿದ. ಅದರಲ್ಲಿ ಸುಮಾರು
ಏಳೆಂಟು ಮಕ್ಕಳಿದ್ದರು.

"ಬೇಡವೋ, ಇಲ್ಲೇ ಹತ್ತಿರದಲ್ಲಿಯೇ ಇದೆಯಲ್ಲ. ನೀನು ಮಕ್ಕಳನ್ನು
ಶಾಲೆಗೆ ಬಿಟ್ಟು ಬಾ"

"ಸರಿ, ಸ್ವಲ್ಪ ದಿನ ಇರ್ತೀಯಾ?"

"ನಾಳೆ ಹೋಗ್ತಾ ಇದ್ದೀನಿ. ಅದಕ್ಕಿಂತ ಮೊದಲು ಭೇಟಿಯಾಗೋಣ"

"ಓ.ಕೆ."

ಆಟೋ ಮುಂದೆ ಹೋಯಿತು. ಏನೋ ನೆನಪಾಗಿ ದಿನ್ನುವನ್ನು
ದೆ. ಆಟೋ ನಿಂತಿತು. ಬೇಗಬೇಗ ಹೆಜ್ಜೆ ಹಾಕುತ್ತಾ ಅದರ ಬಳಿ ಬಂದು
ಳಿದೆ. "ದಿನ್ನೂ, ನನಗೆ ನಾಳೆ ಏಳುಮುಕ್ಕಾಲಿನ ರೈಲಿನಲ್ಲಿ ಹೋಗುವುದಿದೆ.
ನು ಸ್ಟೇಷನ್ನಿಗೆ ತಲುಪಿಸಲು ಬರ್ತಿಯಾ?"

"ಇಲ್ಲಿಂದ ಸಂಜೆ ಆರು ಮುಕ್ಕಾಲಿಗೆ ಹೊರಟರೆ ಸಾಕಲ್ಲ?"

"ಸಾಕು"

ಸ್ಟೇಷನ್ ಹದಿನಾಲ್ಕು ಕಿಲೋಮೀಟರ್ ದೂರವಿದೆ. ಹೊಸ ಸೇತುವೆ
ಇರುವುದರಿಂದ ಮೊದಲಿನ ಹಾಗೆ ರಸ್ತೆತಡೆ ಇರುವುದಿಲ್ಲ.

"ಸರಿ. ಹಾಗಾದರೆ"

ಆಟೋ ಮುಂದೆ ಹೋಯಿತು. ನಾನು ಐದೇ ನಿಮಿಷಗಳಲ್ಲಿ ಕೆರೆ
ಲುಪಿದೆ. ನಾನು ಚಿಕ್ಕವನಿರುವಾಗ ಇದು ತೆರೆದ ಕೆರೆಯಾಗಿತ್ತು. ಈಗ
ಣ್ಣು ಕುಸಿಯಬಾರದೆಂದು ದಡದುದ್ದಕ್ಕೂ ದೊಡ್ಡದೊಡ್ಡ ಬಂಡೆಗಳನ್ನು
ಟ್ಟಿದ್ದಾರೆ. ಆಗ ಸುತ್ತುಮುತ್ತಲಿನ ಮನೆಯವರು ಬಂದು ಸ್ನಾನ ಮಾಡುತ್ತಿದ್ದರು.
ಟ್ಟೆ ಒಗೆಯುತ್ತಿದ್ದರು. ಶಾಲೆಗೆ ಬೇಸಿಗೆ ರಜೆ ಪ್ರಾರಂಭವಾಯಿತೆಂದರೆ ಮಕ್ಕಳು
ಿದಾಟ, ಈಜಾಟ ಕಲಿಯುತ್ತಿದ್ದರು. ನೀರಿನಲ್ಲಿ ಮುಳುಗಿ ಒಂದಿಬ್ಬರು
ಕ್ಕಳು ಜೀವ ಕಳೆದುಕೊಂಡದ್ದೂ ಇದೆ. ಒಬ್ಬ ಹೆಂಗಸು ಇದರಲ್ಲಿ ಹಾರಿ
ತ್ಮಹತ್ಯೆ ಮಾಡಿದ್ದಳು. ಆಮೇಲೆ ಕೆರೆಗೆ ಗೋಡೆ ಕಟ್ಟಲಾಯಿತು. ನಾಲ್ಕೂ
ಕ್ಕಿಗೆ ಗೇಟು ಇಡಲಾಯಿತು. ಮಧ್ಯಾಹ್ನದ ಹೊತ್ತು ಗೇಟನ್ನು ಮುಚ್ಚುವುದು
್ರರಂಭವಾಯಿತು. ಕಾವಲಿಗೊಬ್ಬ ಮನುಷ್ಯ ಬೇರೆ.

ಈಗ ಗೇಟು ತೆರೆದಿದೆ. ನಾನು ಒಳಗೆ ಹೋಗಿ ಕಟ್ಟಿ ತಂದ ಪಿಂಡವನ್ನು
ರಿನಲ್ಲಿ ವಿಸರ್ಜಿಸಿದೆ. ಆಮೇಲೆ ಅಂಗವಸ್ತ್ರವನ್ನು ನೀರಿನಲ್ಲಿ ಮುಳುಗಿಸಿ,
ಂಡಿ ಭುಜದ ಮೇಲೆ ಹಾಕಿಕೊಂಡೆ.

ಹೊರಗೆ ಬಂದಾಗ ಹತ್ತಿರವಿದ್ದ ದೇವಸ್ಥಾನಕ್ಕೆ ಹೋಗಬೇಕೆನಿಸಿತು.
ಲ್ಯದಲ್ಲಿ ತಪ್ಪದೆ ಭೇಟಿ ನೀಡುತ್ತಿದ್ದ ದೇವಸ್ಥಾನ. ಇದೇ ಪ್ರಾಂಗಣದಲ್ಲಿ
ಮ್ಮ ಆಟದ ಗುಂಪು ಸೇರುತ್ತಿತ್ತು. ಈಗಲೂ ಶಾಲೆ ಮುಗಿದ ನಂತರ

ಮಕ್ಕಳು ಇಲ್ಲಿ ಬಂದು ಆಡುತ್ತಿರಬಹುದು. ಬಹಳ ವಿಸ್ತಾರವಾದ ಪ್ರಾಂಗಣ
ಇದಕ್ಕೆ ಪ್ರದಕ್ಷಿಣೆ ಬರಬೇಕಾದರೆ ಆಗ ನಮಗೆ ಹದಿನೈದು ನಿಮಿಷ ಹಿಡಿಯುತ್ತಿತ್ತು
ಆದರೆ ಈಗ ದೇವಸ್ಥಾನಕ್ಕೆ ಬಂದಾಗಲೆಲ್ಲಾ ಈ ಪ್ರಾಂಗಣ ಹಿಂದ
ತಿಳಿದುಕೊಂಡಷ್ಟು ವಿಸ್ತಾರವಾಗಿ ಇಲ್ಲವೆಂಬ ಭಾವನೆ ಬರುವುದು. ನಮ
ಕಾಲು ಬೆಳೆಯುತ್ತದೆ, ವಯಸ್ಸು ಹೆಚ್ಚಾಗುತ್ತದೆ. ಹೀಗಾಗಿ ನಮಗೆ ಭೂಮಿಯ
ವಿಸ್ತಾರ ಕಡಿಮೆಯಾದ ಹಾಗೆ ಕಾಣುವುದೇನೋ?

ಬೆಳಿಗ್ಗಿನ ಪೂಜೆ ಮುಗಿದಿರಬೇಕು. ದೇವಸ್ಥಾನದಲ್ಲಿ ಹೆಚ್ಚು ಜನರೇನೂ
ಇರಲಿಲ್ಲ. ದೇವರಿಗೆ ಕೈ ಮುಗಿದು ತೀರ್ಥ ಪ್ರಸಾದ ತೆಗೆದುಕೊಂಡು
ಹೊರಬಂದೆ. ಮನೆಯತ್ತ ಹೆಜ್ಜೆ ಹಾಕುವಾಗ ರಸ್ತೆ ಸೇರುವಲ್ಲಿ ಕುಣಿ
ಕಂಡಳು. ರಸ್ತೆ ಏನೂ ಹೆಚ್ಚು ವಿಸ್ತಾರವಾಗಿಲ್ಲ. ಅದರ ನಡುವಿನ ವೃ
ಕೂಡ ಹೆಚ್ಚು ಅಗಲವಾಗಿಲ್ಲ. ಈಗ ವಾಹನಗಳ ಸಂಖ್ಯೆ ಹೆಚ್ಚಿದೆ. ಶಾಲ
ಮಕ್ಕಳ ಮತ್ತು ಕಚೇರಿಗೆ ಹೋಗುವ ಉದ್ಯೋಗಿಗಳ ವಾಹನಗಳು ವೇಗದಿಂದ
ಓಡುತ್ತಿವೆ.

ಅವಳು ವೃತ್ತದ ನೆಲದ ಮೇಲೆ ಬಗ್ಗಿ ಕುಳಿತು ಏನನ್ನೋ
ಹುಡುಕುತ್ತಿದ್ದಾಳೆ. ಅವಳ ಕಪ್ಪು ದೇಹದ ಸುಕ್ಕುಗಟ್ಟಿದ ಪದರುಗಳ ಮೇಲಿಂ
ಶ್ರಾವಣದ ಮೃದು ಬಿಸಿಲು ಬೆಳೆಯುತ್ತಿತ್ತು. ಆ ಬಿಸಿಲಲ್ಲಿ ಹಾರಾಡುತ್ತಿರು
ಅವಳ ಬಿಳಿ ಕೂದಲು ಮಿನುಗುತ್ತಿತ್ತು. ವಯಸ್ಸಿನಿಂದ ನೆರಿಗೆಗಟ್ಟಿದ ಅವ
ಬೆರಳುಗಳು ನಿನ್ನೆ ಬಿದ್ದ ಮಳೆಯಿಂದ ಶುಭ್ರವಾಗಿರುವ ರಸ್ತೆಯಲ್ಲಿ ಏನನ್ನೋ
ಹುಡುಕಾಡುತ್ತಿದ್ದವು.

ಅವಳು ತನ್ನ ಕಲ್ಪನೆಯ ಮೊರದಲ್ಲಿರುವ ಅಕ್ಕಿಯ ಕಲ್ಲುಗಳನ್ನು
ಆರಿಸಿಕೊಳ್ಳುತ್ತಿದ್ದಾಳೆ ಎಂಬಂತೆ ಕಂಡಿತು. ಆದರೆ ಅದು ಅಷ್ಟು
ಖಚಿತವೆನಿಸಲಿಲ್ಲ. ಯಾಕೆಂದರೆ ಅವಳ ಬೆರಳುಗಳು ಅಕ್ಕಿಯಲ್ಲಿರು
ಕಲ್ಲುಗಳನ್ನು ಹೆಕ್ಕಿ ತೆಗೆಯುವ ರೀತಿ ಚಲಿಸುತ್ತಿರಲಿಲ್ಲ. ಅವಳು ಏನನ್ನೋ
ಸವರುತ್ತಿರುವ ಸೂಚನೆಯನ್ನು ಅದು ನೀಡುತ್ತಿತ್ತು.

ವೇಗದಿಂದ ಬರುತ್ತಿದ್ದ ವಾಹನಗಳ ಚಾಲಕರು ಹತ್ತಿರ ಬರುತ್ತಿದ್ದಂ
ರಸ್ತೆಯ ನಡುವೆ ಅವಳನ್ನು ಕಂಡ ಕೂಡಲೇ ಬ್ರೇಕ್ ಹಾಕಿ ಅವಳಿಗೆ ತಾಗದಂ

ಚ್ಚರಿಕೆ ವಹಿಸುತ್ತಾ ಮುಂದೆ ಚಲಿಸುತ್ತಿದ್ದರು. ಆಟೋ ಡ್ರೈವರ್‌ಗಳು ವೇಗ
ಡಿಮೆ ಮಾಡಿ ಅವಳಿಗೆ ಪಕ್ಕಕ್ಕೆ ಸರಿದು ಕುಳಿತುಕೊಳ್ಳುವಂತೆ ಹೇಳುತ್ತಿದ್ದರು,
ಎದ್ದು ಮಾರ್ಗದ ಬದಿಗೆ ಹೋಗಮ್ಮಾ. ಗಾಡಿ ತಾಗಿದರೆ ಎಲುಬಿನ ಹುಡಿ
ೂಡಾ ಸಿಗಲಿಕ್ಕಿಲ್ಲ."

ಆದರೆ ಅವಳು ಸ್ವಲ್ಪವೂ ಕದಲಲಿಲ್ಲ. ಅಷ್ಟರಲ್ಲಿ ಸುಮಾರಾಗಿ ಅವಳದೇ
ಯಸ್ಸಿನ ಗಂಡಸೊಬ್ಬರು ಅಂಗಡಿಯಿಂದ ಬಂದು ಅವಳ ಬಳಿ ನಿಂತು,
ತುಳಸೀ, ಅಲ್ಲಿಂದ ಏಳು ಮೇಲೆ. ಹೇಳಿದರೆ ಕೇಳುವುದಿಲ್ಲವೇನು?" ಎಂದರು.

ನಾನು ಅವಳ ಮುಖದತ್ತ ದೃಷ್ಟಿ ಬೀರಿದೆ. ಅವಳ ಮುಖ
ಂಭೀರವಾಗಿದ್ದಂತೆ ಕಂಡಿತು. ಅವಳು ಅಳುತ್ತಿರಬಹುದೆಂಬ ಭಾವನೆ ಬಂತು.
ಆದರೆ ಅವಳ ಕಣ್ಣಿನಲ್ಲಿ ದುಃಖ ಕಾಣಿಸಲಿಲ್ಲ. ಮುಖದ ಮೇಲೆ ಕರುಣೆ,
ಾತ್ಸಲ್ಯ ಮತ್ತು ಯಾವುದೋ ನೆನಪಿನ ಭಾವಗಳ ನೆರಳು ಕಂಡಿತು.

ವಯಸ್ಸಾದ ವ್ಯಕ್ತಿ ಅವಳ ಕೈಹಿಡಿದು ಎದ್ದು ನಿಲ್ಲಿಸಿದರು. ಆಮೇಲೆ
ಧಾನವಾಗಿ ನಡೆಸುತ್ತ ರಸ್ತೆಯ ಬದಿ ತಂದು ನಿಲ್ಲಿಸಿದರು. ಅವಳು ಏನೋ
ುಣಮಣಿಸುತ್ತಿದ್ದಳು. ಆದರೆ ಅವಳ ಮಾತು ಸ್ಪಷ್ಟವಾಗಿರಲಿಲ್ಲ. ಕೆಳಧ್ವನಿಯಲ್ಲಿ
ೊಣಗಾಡುತ್ತಾ ಮುಂದೆ ನಡೆದಳು. ಅವಳು ಹೆಜ್ಜೆ ಮುಂದಿಟ್ಟಾಗ ಅವಳ
ಡಿಗೆ ಸಾಮಾನ್ಯ ರೀತಿಯದ್ದಾಗಿ ಇಲ್ಲವೆಂಬುದು ನನ್ನ ಗಮನಕ್ಕೆ ಬಂತು.
ಅವಳು ಹೇಗೇಗೋ ನಡೆಯುತ್ತಿದ್ದಳು. ವಯಸ್ಸಿನಿಂದಾಗಿ ಕಾಲು ಎತ್ತಿ
ಇಡುವುದು ಸಾಧ್ಯವಾಗದ್ದರಿಂದ ಅವಳು ಕುಂಟುತ್ತಿರಬೇಕು.

ಹೀಗೆ ಅವಳು ನಡೆದು ಹೋಗುತ್ತಿರಬೇಕಾದರೆ ಒಂದು ವಿಚಾರ
ುನಸ್ಸಿಗೆ ಹೊಳೆಯಿತು,

"ಏನು ಹೇಳುತ್ತಿದ್ದಾಳೆ ತುಳಸಿ? ಅವಳ ತಲೆಯೊಳಗೆ ಏನಿದೆ? ಜಾತ್ರೆಯ
ಪದಗಳೇ? ಸಿನೆಮಾ ಹಾಡುಗಳೇ? ಅಥವಾ ಬಂಧನದಿಂದ ಬಿಡಿಸಿ
ಬಂದಂತಹ ಮಾತಿನ ಗೊಂದಲಗಳೇ?"

ನಾನು ಮನೆ ತಲುಪಿದೆ. ಭಟ್ಟರು ತಿಂಡಿ ಮುಗಿಸಿ ದಿನಪತ್ರಿಕೆ ಹಿಡಿದು
ುಳಿತಿದ್ದಾರೆ. ಅದರಲ್ಲಿದ್ದ ಸುದ್ದಿಗಳ ಕುರಿತು ಮಾತನಾಡಿದ ನಂತರ ಅವರು

ಊರಿನ ಸುದ್ದಿ ಎತ್ತಿದರು. 'ವಠಾರದ ಶಾಲೆಯನ್ನು ಅಭಿವೃದ್ಧಿ ಪಡಿಸಲು ಮ್ಯಾನೇಜ್‌ಮೆಂಟ್ ದೊಡ್ಡ ರೀತಿಯ ಪ್ರಯತ್ನವನ್ನು ನಡೆಸುತ್ತಿಲ್ಲ. ದೇವಸ್ಥಾನದ ಒಂದೂವರೆ ಎಕರೆ ಜಾಗ ಖಾಲಿ ಬಿದ್ದಿದೆ. ಅಲ್ಲಿ ಆಸ್ಪತ್ರೆ ಅಥವಾ ಕಾಲೇಜನ್ನು ಸ್ಥಾಪಿಸಬಹುದು. ಏನೂ ಇಲ್ಲದಿದ್ದರೆ ಒಂದು ಸಣ್ಣ ಉದ್ಯೋಗವನ್ನಾದರೂ ಪ್ರಾರಂಭಿಸಬಹುದು. ಇದರಿಂದ ವಠಾರದ ಜನರಿಗೆ ನೌಕರಿ ಸಿಗುತ್ತದೆ. ಆದರೆ ಇಂತಹ ವಿಚಾರಗಳಲ್ಲಿ ಯಾರಿಗೂ ಆಸಕ್ತಿ ಇಲ್ಲ. ದೇವಸ್ಥಾನದ ಸುಧಾರಣೆ ಎಂದು ಏನಾಯಿತು ಗೊತ್ತಾ? ಎಲ್ಲಿಂದಲೋ ಒಬ್ಬ ಎಂಬಿಎ ಮ್ಯಾನೆಜರ್ ಅಂತ ನೇಮಕಗೊಂಡ. ಅವನಂತೂ ದೇವಸ್ಥಾನದ ಕೊಠಡಿಯಲ್ಲಿ ಬಿದ್ದಿದ್ದ ಎಷ್ಟೊ ಹಳೆ ವಸ್ತುಗಳನ್ನು 'ಗುಜರಿ ವಸ್ತು'ಗಳೆಂದು ಹೇಳಿ ಯಾಕೆ ಇದನ್ನು ಇಟ್ಟಿದ್ದಾರೆ ಎನ್ನುತ್ತಾ ಏಲಂ ಹಾಕುವ ಪ್ರಯತ್ನ ನಡೆಸಿದ... ಇನ್ನು ಶತಮಾನಗಳಷ್ಟು ಹಿಂದೆ ಯಾರೋ ದೇವಸ್ಥಾನಕ್ಕೆ ದಾನವಾಗಿ ನೀಡಿದ ಹಳೇ ಶೈಲಿಯ ಒಂದು ಬಂಗಲೆ ಇತ್ತು ನೋಡು, ಅದನ್ನು ಕೆಡವಿ ಕಲ್ಯಾಣ ಮಂಟಪ ಕಟ್ಟಿಸುವ ಯೋಜನೆ ನಡೆಯುತ್ತಿದೆ..ಯಾರು ಏನು ಮಾಡುತ್ತಿದ್ದಾರೆ ಎನ್ನುವುದು ಯಾರಿಗೂ ಗೊತ್ತಿಲ್ಲ, ಯಾರಿಗೂ ಬೇಕಾಗಿಯೂ ಇಲ್ಲ. ಎಲ್ಲವೂ ಕೈಮೀರಿ ಹೋಗುತ್ತಿದೆ.'

ಭಟ್ಟರು ನಿರ್ಗಮಿಸಿದ ಬಳಿಕ ತಮ್ಮ, ತಂಗಿಯರೊಂದಿಗೆ ಮಾತುಕತೆ ನಡೆಸುತ್ತಾ, ಅವರ ಮಕ್ಕಳೊಂದಿಗೆ ಆಟವಾಡುತ್ತಾ, ಟಿವಿ ನೋಡುತ್ತಾ ಇಡೀ ದಿನ ಕಳೆಯಿತು.

ಮರುದಿನ ಉಪಹಾರ ಸೇವಿಸಿದ ನಂತರ ಹೊರಗೆ ಹೋಗಲು ಸಿದ್ಧನಾಗಿ ಅಮ್ಮನಲ್ಲಿ ಹೇಳಿದ.

"ಇಲ್ಲಿಯೇ ಸ್ವಲ್ಪ ಹೋಗಿ ಬರ್ತಿನಿ. ಮಧ್ಯಾಹ್ನ ಊಟಕ್ಕೆ ಬರುವುದಿಲ್ಲ. ಸ್ನೇಹಿತರನ್ನು ಭೇಟಿಯಾಗದೆ ಸುಮಾರು ಸಮಯವಾಯಿತು. ಅವರನ್ನು ಮಾತನಾಡಿಸಿ ಬರುತ್ತೇನೆ. ಸಂಜೆ ನಾಲ್ಕಕ್ಕೆ ಬಂದು ಮುಟ್ಟಬಹುದು. ಆರೂ ಮುಕ್ಕಾಲಿಗೆ ಸ್ಟೇಷನ್ನಿಗೆ ಕರೆದೊಯ್ಯಲು ದಿನ್ನುವನ್ನು ಬರಲಿಕ್ಕೆ ಹೇಳಿದ್ದೇನೆ."

"ಸರಿ. ಬೇಗ ಬಾ. ಉಂಡೆ, ಲಡ್ಡು ಮತ್ತು ಚಕ್ಕುಲಿ ಪ್ಯಾಕ್ ಮಾಡಿ ಇಟ್ಟಿದ್ದೇನೆ. ನಿನ್ನ ಬ್ಯಾಗಿನ ಹತ್ತಿರ ಇದೆ. ಇವತ್ತು ಬಿಸಿಲು ಬಿದ್ದಿದೆಯಲ್ಲ ರೋಹಿಣಿಗೆ ಹಪ್ಪಳ ಮಾಡುವಂತೆ ಹೇಳುತ್ತೇನೆ."

ಏನೂ ಬೇಡ. ಈಗ ಇದು ಎಲ್ಲಾ ಊರುಗಳಲ್ಲಿ ಸಿಗುತ್ತವೆ. ಸುಮ್ಮನೆ ಂದರೆ ತೆಗೆದುಕೊಳುವುದು ಯಾಕೆ ಎಂದು ಹೇಳಿದರೆ ಅವಳು ಅದನ್ನು ವಿ ಮೇಲೆ ಹಾಕಿಕೊಳ್ಳುವುದಿಲ್ಲ. ಹೀಗಾಗಿ 'ಹುಂ'ಗುಟ್ಟಿ ನಾನು ಹೊರಬಿದ್ದೆ.

ಸಂಜೆ ಮರಳಿ ಬಂದು ಬ್ಯಾಗಿಗೆ ಸಾಮಾನು ತುಂಬಿಸುತ್ತಿರುವಾಗ ಮ್ಮ ಬಂದು ವಿಚಾರಿಸಿದಳು,

"ಇನ್ನು ಯಾವಾಗ ಬರ್ತಿಯಾ?"

"ನೋಡುವಾ"

"ಮಾರ್ಗಶಿರದಲ್ಲಿ ದೇವಸ್ಥಾನದಲ್ಲಿ ಜಾತ್ರೆ ಇದೆ. ನೆನಪಿದೆ ತಾನೇ?"

"ಇದೆ. ಬರ್ತೇನೆ"

"ಸೌಮ್ಯಳನ್ನು ಮತ್ತು ಮಕ್ಕಳನ್ನು ಕರೆದುಕೊಂಡು ಬಾ'

"ಸರಿ"

ಆರೂಮುಕ್ಕಲು ಗಂಟೆಗೆ ಸರಿಯಾಗಿ ಹೊರಗೆ ಗೇಟಿನ ಬಳಿ ದಿನ್ನುವಿನ ಟೋ ಬಂದು ನಿಂತ ಸದ್ದಾಯಿತು. ಎಲ್ಲರಿಗೂ ವಿದಾಯ ಹೇಳಿ ಹೊರಗೆ ಂದು ಆಟೋದಲ್ಲಿ ಕುಳಿತೆ. ಅವನು ಗಾಡಿ ಮುಂದೋಡಿಸಿದ. ರಸ್ತೆ ೂಡುವಲ್ಲಿ ಗಾಡಿಯ ವೇಗ ಕಡಿಮೆಯಾಯಿತು.

ರಸ್ತೆಯ ನಡು ಭಾಗದಲ್ಲಿ ಸೋಡಿಯಮ್ ದೀಪದ ಗಾಢ ಬೆಳಕಿನಲ್ಲಿ ಂದು ತುಳಸಿ ನಿಂತಿದ್ದಾಳೆ. ಹಿಂದೆ ಎಷ್ಟೋ ಬಾರಿ ಮಾಡಿದಂತೆ ಅವಳು ರಡು ಕೈಗಳನ್ನು ಮುಂದೆ ಚಾಚಿಕೊಂಡಿದ್ದಾಳೆ. ಸ್ವಲ್ಪ ಹೊತ್ತಿನಲ್ಲಿಯೇ ಕಣ್ಣಿಗೆ ಕಾಣದ ಹಗ್ಗವನ್ನು ಹಿಡಿದು ಹಿಂದೆ ಮುಂದೆ ಚಲಿಸಲು ಪ್ರಾರಂಭಿಸಿದ್ದಾಳೆ. ಅವಳು ತೊಟ್ಟಿಲು ತೂಗುತ್ತಿರಬಹುದೇ?

ದಿನ್ನು ಆಟೋ ನಿಲ್ಲಿಸಿದ.

"ಅಯ್ಯೋ ದೇವರೇ! ಈ ಹೆಂಗಸಿನಿಂದ ದೊಡ್ಡ ತಾಪತ್ರಯವಾಗಿದೆ ಯಲ್ಲ. ಅಮ್ಮಾ ತುಳಸೀ, ಬದಿಗೆ ಸರಕೊಳ್ಳೇ"

ಅವಳು ಮಾತ್ರ ತೊಟ್ಟಿಲು ತೂಗುತ್ತಾ ನಿಂತುಬಿಟ್ಟಳು. ದಿನ್ನು ಇಂಜಿನ್ ಆಫ್ ಮಾಡಿ ಕೆಳಗಿಳಿದ. ಹತ್ತಿರ ಹೋಗಿ ಅವಳನ್ನು ಬಳಸಿ ಹಿಡಿದು ರಸ್ತೆಯ ಬದಿಗೆ ತಂದು ನಿಲ್ಲಿಸಿದ. ಆಮೇಲೆ ನಗುತ್ತಾ ಹೇಳಿದ. "ಇನ್ನು ಇಲ್ಲಿ ನಿಂತು ನಿನಗೆ ಬೇಕಾದ್ದು ಮಾಡಿಕೋ. ನಮಗೆ ಹೋಗಲಿಕ್ಕೆ ಬಿಡು."

ಅವನು ಮತ್ತೆ ಬಂದು ಇಂಜಿನ್ ಚಾಲೂ ಮಾಡುತ್ತಿರುವಾಗ ನಾನು ಕೇಳಿದೆ,

"ಅವಳು ಇದೇ ವಠಾರದವಳೇ?"

"ಹೌದು, ಇಲ್ಲಿಯವಳೇ. ನಿನಗೆ ಪರಿಚಯವಿಲ್ಲವೇ?"

ನನಗೆ ಅವಳ ಪರಿಚಯವಿರಲಿಲ್ಲ. ಅವನು ಅವಳ ಮಾಹಿತಿ ನೀಡಿದ. ಅವಳ ಚಿಕ್ಕಮಗ ಅಯ್ಯಪ್ಪ ದರ್ಶನಕ್ಕಾಗಿ ಶಬರಿಮಲೈಗೆಂದು ಹೊರಟವವನನ್ನು ಯಾರೋ ಚೂರಿ ಹಾಕಿ ಕೊಂದರಂತೆ.

"ನಾವು ಹತ್ತನೇ ಕ್ಲಾಸಿನಲ್ಲಿ ಓದುತ್ತಿದ್ದೆವು ನೋಡು. ಆಗ ನಡೆದದ್ದು. ನಿನಗೆ ನೆನಪಿಲ್ಲವೇ?"

ತಕ್ಷಣ ನೆನಪಿಗೆ ಬಂತು. ಹದಿನೈದು ವರ್ಷಗಳ ಹಿಂದೆ ಪುಷ್ಯ ಮಾಸದ ರಾತ್ರಿ ನಡೆದ ಘಟನೆ. ಸಂಜೆ ಸುಮಾರು ಏಳುಗಂಟೆಗೆ ಯಾವುದೋ ಹೆಂಗಸು ಜೋರಾಗಿ ಕಿರಿಚಿ ಮನೆಯ ಮುಂದಿನ ರಸ್ತೆಯಲ್ಲಿ ಓಡಿ ಹೋದದ್ದು. ಆಗ ಯಾರೋ ಹೇಳಿದ್ದು, ಕುಣಬಿ ಹಾಡಿಯ ನನ್ನನಿಗೆ ಚೂರಿ ಹಾಕಿದ್ದಾರೆ. ಅವನು ಒದ್ದಾಡುತ್ತಿದ್ದಾನೆ. ಜನರು ಶಟ್ಟರ್ ಎಳೆದು ಓಡಿ ಹೋಗುತ್ತಿದ್ದಾರೆ. ಸ್ವಲ್ಪ ಹೊತ್ತಿನಲ್ಲಿಯೇ ಕರ್ಫ್ಯೂ ಘೋಷಣೆಯಾಗಿತ್ತು.

ಅವನು ಶಬರಿಮಲೆಗೆ ಹೋಗುವುದಕ್ಕಾಗಿ ನಾಲ್ವತ್ತು ದಿನಗಳ ವ್ರತ ಪ್ರಾರಂಭಿಸಿದ್ದ. ಮಾಲೆ ಧರಿಸಿದ್ದ. ಕಪ್ಪು ಪಂಚೆಯ ವೇಷ ತೊಟ್ಟಿದ್ದ. ಆ ದಿನಗಳಲ್ಲಿ ಅಯೋಧ್ಯೆಯ ಮಸೀದಿಯನ್ನು ಧ್ವಂಸಗೊಳಿಸಿದ ಚಿತ್ರ ಮತ್ತೆ ಮತ್ತೆ ಕಾಣುತ್ತಿತ್ತು.

ನನ್ನೊಳಗೆ ಬೆಳಕು ಚೆಲ್ಲಿದಂತಾಯಿತು.

ತುಳಸಿ ರಸ್ತೆಯಲ್ಲಿ ಬಿದ್ದ ಅಕ್ಕಿಯಿಂದ ಕಲ್ಲು ಆರಿಸುತ್ತಿರಲಿಲ್ಲ. ಅವಳು ಒಂಭತ್ತು ತಿಂಗಳು ಹೊತ್ತು ಹೆತ್ತ ತನ್ನ ಮಗನ ಮೈದಡವುತ್ತಿದ್ದಳು. ಅವಳು

ಅಂಗಡಿ ಜಗಲಿಯ ಮೇಲೆ ಕುಳಿತು ಮೊರದಲ್ಲಿರುವ ಧಾನ್ಯ ಕೆರೆಯುತ್ತಿರಲಿಲ್ಲ. ತನ್ನ ಮಗುವನ್ನು ಕೈಯಲ್ಲಿ ಹಿಡಿದು ಆಡಿಸುತ್ತಿದ್ದಳು. ಅವಳು ಜೀಕುತ್ತಿದ್ದುದು ಕಲ್ಪನೆಯ ಜೋಕಾಲಿಯನ್ನಲ್ಲ. ಅದು ಅವಳ ಹೃದಯದ ತೊಟ್ಟಿಲು. ಅವಳ ಬಾಯಿಯಿಂದ ಹೊರಡುತ್ತಿದ್ದುದು ಜಾತ್ರೆಯ ಪದಗಳಲ್ಲ. ಎದೆಗೊತ್ತಿ ಹಿಡಿದ ಮಗುವಿನ ಜೋಗುಳದ ಹಾಡು.

ನನ್ನ ಮನಸ್ಸಿನಲ್ಲಿ ಅಯೋಧ್ಯೆ, ಗೋಧ್ರಾ, ಮಾಲೆಗಾಂವ್, ಹೈದರಾಬಾದ್ ಹೀಗೆ ಬೇಕಾದಷ್ಟು ಹೆಸರುಗಳು ಬಂದವು. ಆಮೇಲೆ ಅನಿಸತೊಡಗಿತು, ಈ ಹೆಸರುಗಳೊಂದಿಗೆ ತುಳಸಿಯ ಹೆಸರನ್ನು ಕೂಡಾ ನಾವು ಹೇಳಬೇಕಾಗುತ್ತದೆ.

ದೇವಸ್ಥಾನದಿಂದ ಎಂ.ಎಸ್. ಸುಬ್ಬುಲಕ್ಷ್ಮಿಯ "ಪಾವಯಾಮಿ ರಘುರಾಮನ.." ಹಾಡು ಕೇಳಿಬರಲಾರಂಭಿಸಿತು. ಈಶಾನ್ಯ ದಿಕ್ಕಿನಿಂದ ಯಾವುದೋ ಮಸೀದಿಯ ಪ್ರತಿದಿನದ ಕೂಗು ಕೇಳಿಬಂತು. ಆಟೋ ಮುಂದುವರಿಯುತ್ತಿದ್ದಂತೆ ಸುಬ್ಬುಲಕ್ಷ್ಮಿಯ ಧ್ವನಿ ಮತ್ತು ಮಸೀದಿಯ ಕರೆ ದೂರದೂರವಾಗತೊಡಗಿತು.



1. ಶುಂಠಿ ಅಮ್ಮಾ ಶುಂಠಿ
   ಎರಡೆಳೆ ಮೂರೆಳೆಯ ತೊಟ್ಟಿಲು
   ನನ್ನ ಸೋದರ ಸಾಸಷ್ಟಿಗೆ ಹೋಗಿರುವನು
   ಅಲ್ಲಿ ಆಯಿತಲ್ಲ ಬೆಳಗು
2. ಸಾಸಷ್ಟಿಗೆ ಹೋದ ತಮ್ಮ ಏನು ತಂದನೇ?
   ಸಾಸಷ್ಟಿಯ ತೆಂಗಿನಗರಿ ತಂದು
   ಬಾಗಿಲು ಕಟ್ಟಿದ.
   ಬಾಗಿಲು ಕಟ್ಟಿದ ದೀಪ ಹಚ್ಚಿದ
   ಮನೆಯಲ್ಲಿನ ಅತ್ತಿಗೆಯೇ ನಿನಗೆ
   ಮೈದುನ ಗೌರವ ನೀಡಿದ.

# ಓಕುಳಿ

ಟೆರೇಸ್ ಮೇಲೆ ಹತ್ತಿಕೊಂಡು 'ಹುಲಿ'ಯ ದಾರಿ ಕಾಯುತ್ತಿದ್ದ ಗೋವಿಂದನಿಗೆ ಬೇಸರವಾಗತೊಡಗಿತು. ಒಂದೇ ಒಂದು ವೇಷ ಕೂಡಾ ತನ್ನ ದೃಷ್ಟಿಯಿಂದ ತಪ್ಪಿಸಿ ಹೋಗಬಾರದೆಂದು ಬೆಳಿಗ್ಗಿನಿಂದ ಅವನು ಅಲ್ಲಿಯೇ ಕುಳಿತಿದ್ದಾನೆ. ಹಾಳಾದವರು, ಯಾರೂ ಬರಲೇ ಇಲ್ಲ.

ದೂರದಿಂದ ಗುಮಟೆ ಸದ್ದು ಕೇಳಿಬರುತ್ತಿದೆ. ಬೆಳಿಗ್ಗೆ ಪಪ್ಪಾಯಿ ಗಿಡದ ಕೆಳಗೆ ನಿಂತು ಮೂತ್ರ ಹೊಯ್ಯುವಾಗ ಗುಮಟೆ ಸದ್ದು ಕೇಳಿಯೇ ಅವನ ರೋಮ ನಿಮಿರಿ ನಿಂತಿತ್ತು. ಇವತ್ತು ಓಕುಳಿ! ಮೊನ್ನೆ ಶಾಲೆಯಲ್ಲಿ ಮಕ್ಕಳೊಂದಿಗೆ ಅವನು ಕೂಡಾ ದೊಡ್ಡಧ್ವನಿ ತೆಗೆದು ಹಾಡಿದ್ದ–

ಇವತ್ತು ಹೋಳಿ
ನಾಳೆ ಸುರ್ನಳಿ(ದೋಸೆ)
ನಾಡಿದು ಓಕುಳಿ
ಅದರ ನಾಡಿದು ಎತ್ತಿಕೊಳ್ಳಿ!

ನೋಡಿದರೆ ಓಕುಳಿ ಬಂದೇಬಿಟ್ಟಿದೆ! ಇವತ್ತು ಬಹಳ ಮಂದಿ ಆಸಕ್ತಿಯಿಂದ ವೇಷ ಹಾಕುತ್ತಾರೆ. ದೇವರು, ರಾಕ್ಷಸ, ಹುಲಿ, ಸಿಂಹ, ಕಾಡುಮನುಷ್ಯ ಹೀಗೆ ಏನೇನೋ ವೇಷಗಳು! ಅವರೆಲ್ಲಾ ಮನೆಮನೆಗೆ ತಿರುಗಿ ಡಬ್ಬಿ ಅಲುಗಾಡಿಸುತ್ತಾ ಹಣ ಪಡೆಯುತ್ತಾರೆ. ಮಧ್ಯಾಹ್ನದ ನಂತರ ಮಜಾ ಹೆಚ್ಚು. ಎಲ್ಲಾ ವೇಷಗಳು ದೇವಸ್ಥಾನದ ಬಳಿ ಇರುವ ಅರಳಿಮರದ ಕೆಳಗೆ ಸೇರುತ್ತವೆ ಮತ್ತು ಗುಮಟೆಯ ಸದ್ದಿಗೆ ತಾಳ ಹಾಕಿ ಕುಣಿಯುತ್ತವೆ. ಕಳೆದ ವರ್ಷ ವಿಮಲಾಳ ಗಂಡನೂ ವೇಷ ಹಾಕಿ ದಿನವಿಡೀ ಬಿಸಿಲಲ್ಲಿ ತಿರುಗಾಡಿಕೊಂಡಿದ್ದ. ಆಮೇಲೆ ಸಂಜೆಹೊತ್ತು ಅರಳಿಮರದ ಕೆಳಗೆ ಕುಣಿಯುವಾಗ ತಲೆ ತಿರುಗಿ ಬಿದ್ದೇಬಿಟ್ಟಿದ್ದ. ಅಲ್ಲ..ಅವನು ಕುಡಿದು ಬಿದ್ದಿರಬಹುದೇ? ಇವತ್ತು ಸಂಜೆ ಹೋಗಿ ನೋಡಬೇಕು. ಎಲ್ಲಾ ವೇಷಗಳು ಅಲ್ಲಿಯೇ ಅರಳಿಮರದ ಕೆಳಗೆ ಇರುತ್ತವೆ. ವಿಮಲಾಳ ಗಂಡ ವೇಷ ಹಾಕಿದರೂ, ಹಾಕದಿದ್ದರೂ ಅಲ್ಲಿ ಇರುವುದಂತೂ ಖಂಡಿತ

ಬಿಸಿಲು ತಂಪಾಗುವ ಹೊತ್ತಲ್ಲಿ 'ಕಾಮು'ನನ್ನು ಸುಡುತ್ತಾರೆ. ಕಳೆದ ಬಾರಿಯ 'ಕಾಮನಗೊಂಬೆ' ಎರಡೂವರೆ ಮೀಟರ್ ಉದ್ದವಿದ್ದು ಚೆನ್ನಾಗಿ ಬಂದಿತ್ತು. ಎಡಕೈ ಪ್ಯಾಂಟಿನ ಜೇಬಿನಲ್ಲಿ, ಬಲಗೈಯಿಂದ ಸಲಾಮು ಹೊಡೆಯುವ ಭಂಗಿಯಲ್ಲಿ ನಿಲ್ಲಿಸಿದ್ದರು. ಅದನ್ನು ಅವರು ಮಾಡಿದ್ದು ಯಾವಾಗ? ಅಡಿಕೆ ಮರವನ್ನು ಕೊಂಡೊಯ್ಯುವ ಮೊದಲೇ ಅಥವಾ ಅದರ ನಂತರವೇ? ಆ ದಿನ ಮಹಾದೇವ ದೇವಸ್ಥಾನದ ಹಿತ್ತಿಲಿಂದ ಎರಡು ಅಡಿಕೆ ಮರಗಳನ್ನು ಕದ್ದು ತಂದು ಮುಸ್ಸಂಜೆಯ ಹೊತ್ತಿನಲ್ಲಿ ಡೋಲು ಮತ್ತು ಗುಮಟೆಯೊಂದಿಗೆ "ಓ-ಹೋಯ್...ಓ ಹೋಯ್..' ಎನ್ನುತ್ತಾ ಅರಳಿಮರದ ಬಳಿ ನೆಟ್ಟಗೆ ನಿಲ್ಲಿಸಿದ್ದು ನೆನಪಿದೆ. ಗೊಂಬೆ ಯಾವಾಗ ಮಾಡಿದ್ರು? ಅದರ ನಂತರವೇ, ಅಥವಾ ಅದಕ್ಕಿಂತ ಮುಂಚೆ ಇರಬಹುದೇ? ಯಾರಿಗ್ಗೊತ್ತು! ಅದರ ನಂತರ ಪ್ರತಿದಿನ ಶಾಲೆಗೆ ಹೋಗಿ ಬರುವಾಗಲೆಲ್ಲಾ ಅರಳಿಮರದ ಮೇಲೆ ಗೊಂಬೆ ನೋಡಲು ಸಿಗುತ್ತಿತ್ತು. ಈ ನಡುವೆ ಯಾರೋ ಕಲ್ಲು ಬೀರಿ ಅದರ ಅಂಗಿಯನ್ನು ಹರಿದಿದ್ದಾರೆ. ಈಗ ಗೊಂಬೆಯ ಹೊಟ್ಟೆಯಿಂದ ಹಳೆಬಟ್ಟೆಗಳು ಹೊರಗೆ ಬಂದಿವೆ.

ಇವತ್ತು ಪಾಪದ ಗೊಂಬೆಯನ್ನು ಸುಡುವುದಿದೆ. ಮಧ್ಯಾಹ್ನ ವಾಡೆಯಿಡೀ ಗೊಂಬೆಯ ಮೆರವಣಿಗೆ ನಡೆಯುವುದಿದೆ. ನಂತರ ಸಂಜೆ ಮತ್ತೆ ಅರಳಿಮರದ ಬಳಿ ತಂದು ಕೊನೆಗೆ ಸುಡುವಾಗ ಅಲ್ಲಿ ಸೇರಿದವರೆಲ್ಲಾ ಗಟ್ಟಿ ಧ್ವನಿಯಲ್ಲಿ ಕೂಗಲಿದ್ದಾರೆ, "ಇದ್ದನೊಬ್ಬ ಕಾಮದೇವ ಸತ್ತನಲ್ಲಾ ದೇವರೇ! ಇದ್ದನೊಬ್ಬ ಕಾಮದೇವ, ಸತ್ತನಲ್ಲಾ ದೇವರೇ! ..ಇದ್ದನೊಬ್ಬ ಕಾಮದೇವ.." ಗೊಂಬೆ ಸುಟ್ಟು ಬೂದಿಯಾಗುವಾಗಲೇ, ಅಲ್ಲಿ ಸೇರಿದ ಜನರು ಆ ಬೂದಿಯನ್ನು ಮೈಗೆ ಹಚ್ಚಿಕೊಳ್ಳುತ್ತಾರೆ. ಆಮೇಲೆ ಸ್ನಾನ ಮಾಡಲು ಓಡುತ್ತಾರೆ. ಅವರ ಸ್ನಾನಕ್ಕೆಂದು ಮನೆಮನೆಯ ಮುಂದೆ ಬಾಲ್ದಿಯಲ್ಲಿ ಅಥವಾ ದೊಡ್ಡದೊಡ್ಡ ತಪ್ಪಲೆಗಳಲ್ಲಿ ಅರಿಶಿನದ ನೀರು ಇಡುತ್ತಾರೆ. ನಾವು ಕೂಡಾ ಇಡುತ್ತೇವೆ.

ಗೋವಿಂದನಿಗೆ ಅರಿಶಿನ ಅರೆಯುವ ಕಾರ್ಯ ನೆನಪಿಗೆ ಬಂತು. ಅರೆದಿಟ್ಟ ಅರಿಶಿನಕ್ಕೆ ಸುಣ್ಣ ಬೆರೆಸಿದರೆ ಕೆಂಪು ಹಿಟ್ಟು ಸಿಗುತ್ತದೆ. ಅದನ್ನು ನೀರಿನಲ್ಲಿ ಕಲೆಸಿದರೆ ನೀರು ಕೆಂಪಾಗುತ್ತದೆ. ಎಲ್ಲರ ಮನೆಗಳಲ್ಲಿ ಹೀಗೇ

ಮಾಡುವುದು. ಆದರೆ ಕೆಲವರು ನೀರಿನಲ್ಲಿ ಮೆಣಸಿನ ಪುಡಿ ಕೂಡಾ ಹಾಕುತ್ತಾರೆ. ಆ ನೀರು ಕಣ್ಣಿಗೆ, ಮೂಗಿಗೆ ಹೋದರೆ ಉರಿಯುವುದಿಲ್ಲವೇ? ಗೋವಿಂದನಿಗೆ ಚಿಂತೆಯಾಯಿತು.

ದೂರದಲ್ಲೆಲ್ಲೋ ಗುಮಟೆಯ ಸದ್ದು ಕೇಳಿಬರತೊಡಗಿತು. ಹತ್ತಿರದಲ್ಲಿ ಯಾಕೆ ಇಲ್ಲ? ಈ ಬಾರಿ ಹೀಗ್ಯಾಕೆ? ಕಳೆದ ವರ್ಷ ಇಲ್ಲಿ ಎಷ್ಟು ವೇಷ ಬಂದುಹೋಗಿತ್ತು! ಅವರಿಗೆ ನಮ್ಮ ಮನೆ ಮರೆತುಹೋಯಿತೇ? ಅಥವಾ ನಾನು ಏಳುವ ಮೊದಲೇ ಬಂದಿರಬಹುದೇ? ವಿಮಲಾಳಲ್ಲಿಯೇ ಕೇಳಬೇಕು.

ವಿಮಲಾ ಭಾವಿಯ ಬಳಿ ನಿಂತು ಬಟ್ಟೆ ಒಗೆಯುತ್ತಿದ್ದವಳು ಗೋವಿಂದನನ್ನು ನೋಡಿ ಅವನಿಗಿಂತ ಮೊದಲೇ ಕೇಳಿದಳು.

"ಏನೋ ಹುಡುಗಾ, ಇನ್ನೂ ಸ್ನಾನ ಮಾಡಿಲ್ವಾ?"

"ಸ್ನಾನ ಮಾಡಿಲ್ಲ. 'ಹುಲಿ' ಬಂದರೆ?"

"ಬಂದರೆ ಏನಾಯಿತು?"

"ನೋಡುವುದು ಹೇಗೆ?"

"ಹುಲಿ ನೋಡಿದ್ದು ಸಾಕಾಗಲಿಲ್ವಾ?" ವಿಮಲಾ ನಗುತ್ತಾ ಹೇಳಿದಳು.

"ಇವತ್ತು ಹುಲಿ ಎಲ್ಲಿ ಬಂದಿದೆ? ಬರಲಿಲ್ಲ ತಾನೇ?"

"ಬಂದಿತ್ತು ಕಣೋ. ನೀನು ನೋಡಿಲ್ವಾ?"

"ಬಂದಿತ್ತಾ, ಯಾವಾಗ?"

"ಬೆಳಿಗ್ಗೆ"

"ನನಗೆ ಗೊತ್ತಾಗಲೇ ಇಲ್ಲ"

"ನೀನು ಎದ್ದಿರಲಿಲ್ಲವೇ?"

ಗೋವಿಂದನಿಗೆ ಕೆಟ್ಟದೆನಿಸಿತು. ಹಾಗಾದರೆ ನಾನು ಏಳುವ ಮೊದಲೇ ಸಾಕಷ್ಟು ವೇಷ ಬಂದು ಹೋಗಿವೆ. ಅಮ್ಮ ನನ್ನನ್ನು ಎಬ್ಬಿಸಲೇ ಇಲ್ಲ. ನನಗೆ

ೋಡುವುದಕ್ಕೂ ಆಗಲಿಲ್ಲ. ಅವನ ಮೂಡ್ ಹಾಳಾಯಿತು. ಅವನು ಸುಮ್ಮನೆ ಮಲಾ ಬಟ್ಟೆ ಒಗೆಯುವುದನ್ನೇ ನೋಡುತ್ತಾ ಕುಳಿತ. ಅವಳು ರವಿಕೆ, ಡ್ಡಿ, ಶರ್ಟ್, ಸೀರೆ ಹೀಗೆ ಒಂದೊಂದೇ ಬಟ್ಟೆಗೆ ಸಾಬೂನು ಹಾಕುತ್ತಿದ್ದಳು. ಲ್ಪ ಹೊತ್ತು ಬಿಟ್ಟು ಅದನ್ನು ಕಲ್ಲಿಗೆ ಬಡಿಯುತ್ತಿದ್ದಳು. ಆಗ ಅದರಿಂದ ಾಬೂನಿನ ನೊರೆ ಹರಿದುಬರುತ್ತಿತ್ತು. ಆ ನೊರೆಯಲ್ಲಿ ಸಣ್ಣಸಣ್ಣ ಗುಳ್ಳೆಗಳು ಟ್ಟು ಸೇರಿ ದೊಡ್ಡ ಗುಳ್ಳೆ ಸೃಷ್ಟಿಯಾಗುತ್ತಿತ್ತು. ಆ ಗುಳ್ಳೆಯ ಮೇಲೆ ಬಿಸಿಲಿನ ರಣ ಬಿದ್ದು ವರ್ಣರಂಜಿತ ಬೆಳಕು ಮೂಡಿಬರುತ್ತಿತ್ತು. ಗೋವಿಂದ ಅದನ್ನು ೋಡುತ್ತಾ ನಿಂತುಬಿಟ್ಟ. ಗುಳ್ಳೆಯ ಬಣ್ಣ ಬದಲಾಗುತ್ತಾ ಹೋಗುತ್ತಿತ್ತು. ಂಪು ಮತ್ತು ಹಸಿರು ಬಣ್ಣ ಸೇರಿ ತೆಳುಬಣ್ಣವಾಗಿ, ಕೆಂಪು ಗುಲಾಬಿ ಬಣ್ಣವಾಗಿ ಂತರ ಅದು ನೇರಳೆಯಾಗಿ, ನೇರಳೆ ನೀಲಿಯಾಗಿ ನಂತರ ಗುಳ್ಳೆ ಡೆದುಹೋಗುತ್ತಿತ್ತು.

"ಏನು ನೋಡುತ್ತಿದ್ದಿ?" ವಿಮಲಾ ಕೇಳಿದಳು.

"ಆಂ!"

"ಏನು ನೋಡುತ್ತಿದ್ದಿ?"

"ಸಾಬೂನಿನ ನೊರೆ!"

ಅವಳು ನಕ್ಕಳು. ಈಗ ಅವನು ಪ್ರಶ್ನೆ ಹಾಕಿದ–

"ವಿಮಲಾ?"

"ಏನೋ?"

"ನಿನ್ನ ಗಂಡ ಇವತ್ತು ವೇಷ ಹಾಕಿದ್ದಾರಾ?"

"ಹೌದು"

"ಯಾವ ವೇಷ?"

"ಗೊತ್ತಿಲ್ಲ"

"ಅವರು ನಿನಗೆ ಹೇಳಿಲ್ವಾ?"

"ಇಲ್ಲ. ಅವರು ಬೆಳಿಗ್ಗೆಯೇ ಎದ್ದು ಹೋಗಿದ್ದಾರೆ"

"ಇನ್ನು ಯಾವಾಗ ಬರ್ತಾರೆ?"

"ರಾತ್ರಿ"

"ವಿಮಲಾ.."

"ಏನು ಹೇಳು? "

"ನಿನ್ನ ಗಂಡ ಸಾರಾಯಿ ಕುಡಿಯುತ್ತಾರಾ?"

ವಿಮಲ ಅವನನ್ನು ನೋಡುತ್ತಾ ನಿಂತಳು. ಸ್ವಲ್ಪ ಹೊತ್ತು ಕಳೆದ ಬಳಿಕ ಹೇಳಿದಳು–

"ಕುಡಿಯಲಿ, ನನಗೇನು?"

"ರಮೇಶ ಹೇಳ್ತಿದ್ದ, ನಿನ್ನ ಗಂಡ ಕುಡಿದು ಚರಂಡಿಯಲ್ಲಿ ಬಿದ್ದರಂತೆ"

ಅವಳು ಮಾತನಾಡಲಿಲ್ಲ. ಗೋವಿಂದನಿಗೆ ಚಿಂತೆ ಹತ್ತಿತು. ವಿಮಲಾಳ ಗಂಡ ರಾತ್ರಿ ಕುಡಿದು ಬಂದು ಇವಳಿಗೆ ಹೊಡೆಯಬಹುದೇ? ರಾತ್ರಿ! ಇವತ್ತು ರಾತ್ರಿ ಕೂಡಾ ಅವರು ಕುಡಿಯಲು ಹೊರಗೆ ಹೋಗಬಹುದೇ? ಬೇಡ ಇವತ್ತು ರಾತ್ರಿ ಜಗತ್ತಿನ ಎಲ್ಲಾ ಭೂತಗಳು ಭೂಮಿಗಿಳಿದು ಬರುತ್ತವೆ. ರಾತ್ರಿ ಹನ್ನೆರಡು ಗಂಟೆ ಸುಮಾರಿಗೆ ನಾಲ್ಕೂ ದಿಕ್ಕಿನ ಸೇತುವೆಯ ಮೇಲೆ ಭೂತಗಳಿಗೆ ಎಡೆ ಇಡುತ್ತಾರೆ. ಆ ಎಡೆ ತಿನ್ನಲೆಂದು ಅವು ಬರುತ್ತವೆ. ಆದ್ದರಿಂದ ರಾತ್ರಿ ಊಟ ಮುಗಿದ ಬಳಿಕ ಯಾರೂ ಹೊರಗೆ ಹೋಗುವುದಿಲ್ಲ. ಇನ್ನು ಯಾರಾದರೂ ಹೋದರೆಂದರೆ ಅವರಿಗೆ ಭೂತದ ದೃಷ್ಟಿ ಬೀಳುವುದು ಖಂಡಿತ. ನನ್ನ ಅಮ್ಮ ಇಷ್ಟು ಸಣ್ಣದಿರುವಾಗ ಒಕುಳಿ ದಿನ ರಾತ್ರಿ ಮೂತ್ರ ಮಾಡಲು ಹೊರಗೆ ಹೊರಟಿದ್ದಳಂತೆ. ಬಾಗಿಲು ತೆರೆದು ಹೊರಗೆ ನೋಡಿದರೆ ಬೆಟ್ಟದಷ್ಟು ದೊಡ್ಡದಾಗಿರುವ ಎರಡು ಕೆಂಪುಕಣ್ಣುಗಳು ಅವಳಿಗೆ ಕಾಣಿಸಿತಂತೆ. ಅದನ್ನು ನೋಡಿ ಏಳು ದಿನ ಕಳೆಯುವುದರೊಳಗೆ ಅವಳಿಗೆ ಜ್ವರ ಬಂದಿತಂತೆ. ವಿಮಲಾಳ ಗಂಡನೇನಾದರೂ ಹೊರಗೆ ಹೋದರೆ?

“ಗೋವಿಂದಾ..!” ಅವನ ಅಮ್ಮ ಕರೆಯತೊಡಗಿದಳು.

“ನಿನ್ನನ್ನು ಕರೀತಿದ್ದಾರೆ ನೋಡು” ವಿಮಲಾ ಹೇಳಿದಳು. ಗೋವಿಂದ ಎದ್ದು ಮನೆಯೊಳಗೆ ಹೋದ. ಅವನ ಅಮ್ಮ ಅಡುಗೆ ಕೋಣೆಯಲ್ಲಿದ್ದಳು. ಅವನ್ನು ನೋಡಿದ ಕೂಡಲೇ ಗಿರಣಿಗೆ ಹೋಗಿಬರುವಂತೆ ಆಜ್ಞಾಪಿಸಿದಳು.

“ಗಿರಣಿಗಾ? ಯಾಕೆ?”

“ಇವತ್ತು ಓಕುಳಿ ಅಲ್ವೇನೋ, ರಾತ್ರಿ ರೋಂಟಸ್ ಮಾಡಬೇಡವೇ?”

ಅರೆ. ಹೌದಲ್ವಾ! ಇವತ್ತು ರಾತ್ರಿ ಅಕ್ಕಿರೊಟ್ಟಿ ಮಾಡುವುದಿದೆ. ಅಕ್ಕಿ ಹಿಟ್ಟಿನ ರೊಂಟಸ್ ಮತ್ತು ಕಡ್ಲೆಬೇಳೆಯ ಅಡುಗೆ! ಒಳ್ಳೇಯದಾಯ್ತು. ಆದರೆ ನಾನು ಇವತ್ತು ಹೆಚ್ಚು ರೋಂಟಸ್ ತಿನ್ನುವುದಿಲ್ಲ. ಕಳೆದ ಬಾರಿ ಸಾಕು ಬೇಡವೆನ್ನುವಷ್ಟು ತಿಂದು ಆಮೇಲೆ ವಾಂತಿ ಮಾಡಿಕೊಂಡದ್ದು ನೆನಪಿದೆ. ಇವತ್ತು ಎರಡು ಅಥವಾ ಮೂರು ರೊಂಟಸ್ ತಿನ್ನುವುದು, ಹೆಚ್ಚು ಬೇಡ.

“ಯಾಕೋ ಸುಮ್ಮನೆ ನಿಂತುಕೊಂಡಿದ್ದಿ?”

“ಹಾಂ? ಏನಿಲ್ಲ. ನಮ್ಮ ಬೀಸುವ ಕಲ್ಲಿಗೆ ಏನಾಗಿದೆ? ಅದರಲ್ಲಿ ಬೀಸಬಹುದಲ್ಲ!”

“ಅದರ ಕುಟ್ಟಿ ಎದ್ದುಬಂದಿದೆ. ಹೋಗಿ ಗಿರಣಿಗೆ ಕೊಟ್ಟು ಈಗಲೇ ಹಿಟ್ಟು ಮಾಡಿ ತಾ, ಗೊತ್ತಾಯ್ತಾ?”

“ಎಲ್ಲಿದೆ?”

“ನಿಮ್ಮಪ್ಪ ಮಲಗಿದ್ದಾರಲ್ಲಾ, ಆ ಕೋಣೆಯಲ್ಲಿದೆ”

ಗೋವಿಂದ ಅಲ್ಲಿಗೆ ಹೋದ. ಅಲ್ಲಿ ಅವನ ತಂದೆ ಹಾಸಿಗೆ ಹರಡಿ ಮಲಗಿಕೊಂಡಿದ್ದರು. ಅವರನ್ನು ನೋಡಿ ಗೋವಿಂದನಿಗೆ ಹೆದರಿಕೆಯಾಯಿತು. ಇವತ್ತು ಅಪ್ಪ ಹೆಚ್ಚು ಬಾತುಕೊಂಡಿರುವ ಹಾಗೆ ಕಾಣುತ್ತಿದ್ದಾರೆ. ಒಂದೆರಡು ತಿಂಗಳಿಂದ ಹೀಗೇ ಮಲಗಿಕೊಂಡಿದ್ದಾರೆ. ಅವರ ಮೈ ದಿನದಿಂದ ದಿನಕ್ಕೆ ಹೆಚ್ಚು ಹೆಚ್ಚು ಊದಿಕೊಳ್ಳುತ್ತಾ ಇದೆ. ಕೆಲಸಕ್ಕೆ ಹೋಗುವುದು ನಿಂತುಬಿಟ್ಟಿದೆ.

ಏನು ಕಾಯಿಲೆಯೋ! ಆಗಾಗ ವೈದ್ಯರು ಬಂದು ತಪಾಸಣೆ ನಡೆಸಿ ಹೋಗುತ್ತಾರೆ. ಆದರೆ ಊತ ಮಾತ್ರ ಹೆಚ್ಚಾಗುತ್ತಲೇ ಇದೆ. ಅವನು ತಂದೆಯ ಹಾಸಿಗೆಯ ಪಕ್ಕದಲ್ಲಿರುವ ದೊಡ್ಡ ಅಲಮಾರಿಯಿಂದ ಡಬ್ಬಿಯೊಂದನ್ನು ಕೈಗೆತ್ತಿಕೊಂಡ. ಹೌದು ಅಕ್ಕಿಯದೇ ಡಬ್ಬಿ. ಓ, ಶರ್ಟ್ ಹಾಕೇ ಇಲ್ಲವಲ್ಲ. ಯಾವ ಶರ್ಟು ಹಾಕಲಿ? ಶರ್ಟ್ ಹಾಕಿ ಹೊರಗೆ ಹೋದರೆ ಕಷ್ಟವಿದೆ. ಮಕ್ಕಳು ಬೇಕೆಂದೇ ಶರ್ಟಿನ ಮೇಲೆ ಪಿಚಕಾರಿ ಹೊಡೆಯುತ್ತಾರೆ. ಬಣ್ಣ ಎರಚುತ್ತಾರೆ. ಕೆಲವರಂತೂ ರಂಗಿನಲ್ಲಿ ಗೇರುಬೀಜದ ಸೊನೆಯನ್ನು ಕೂಡಾ ಹಾಕುತ್ತಾರಂತೆ. ಹೀಗಾದ್ರೆ ಶರ್ಟಿನ ಕಲೆ ಒಗೆದರೂ ಹೋಗುವುದೇ ಇಲ್ಲ. ಬೇಡ, ಶರ್ಟ್ ಬೇಡವೇ ಬೇಡ. ಹೀಗೇ ಹೋದರಾಯಿತು.

ಅವನು ಬೀದಿಗಿಳಿದ. ದಾರಿಯಲ್ಲಿ ಅವನಿಗೆ ಒಂದು ವೇಷ ಎದುರಾಯಿತು. ಕಾಡುಮನುಷ್ಯನ ವೇಷ. ಇಡೀ ಮೈಗೆ ಕಪ್ಪು ಬಣ್ಣ ಬಳಿದು, ಸೊಂಟಕ್ಕೆ ಎಲೆಗಳ ಅಂಗಿಯನ್ನು ಸುತ್ತಿಕೊಂಡಿದೆ. ಕೈಗೆ, ಕಾಲಿಗೆ ಕಬ್ಬಿಣದ ಬಳೆಗಳು. ಕಿವಿಗೂ ದೊಡ್ಡದೊಂದು ರಿಂಗ್. ಗುಂಗುರು ಕೂದಲು. ಕೈಯಲ್ಲಿ ಬಿಲ್ಲುಬಾಣ. ಗೋವಿಂದ ಬಹಳ ಕುತೂಹಲದಿಂದ ನೋಡತೊಡಗಿದ. ಅವನನ್ನು ನೋಡಿ 'ವೇಷ' ನಕ್ಕಿತು. ಗೋವಿಂದನಿಗೆ ಯೋಚನೆ ಹತ್ತಿತು. ಅದು ನನ್ನನ್ನೇ ನೋಡಿ ನಕ್ಕದ್ದೆ? ಯಾರದು? ವಿಮಲಾಳ ಗಂಡನಿರಬಹುದೇ? ಕೇಳಿಯೇ ಬಿಡೋಣ ಅಂದುಕೊಂಡರೆ ಅಲ್ಲಿ ಬೇರೆ ಮಕ್ಕಳೂ ಇದ್ದಾರೆ. ಹೀಗಾಗಿ ಅವನು ಮಾತಿಲ್ಲದೆ ಮುಂದೆ ಹೆಜ್ಜೆ ಹಾಕಿದ.

ಗಿರಣಿ ತಲುಪಿದ ಕೂಡಲೇ ಮಾಲಿಕನಲ್ಲಿ ಅಕ್ಕಿಹಿಟ್ಟು ಮಾಡಿಕೊಡುವಂತೆ ತಿಳಿಸಿ ಹೊರಗೆ ಬಂದು ನಿಂತುಕೊಂಡ. ಅಲ್ಲಿ ಭೀಮ, ಕೃಷ್ಣ, ಹನುಮಂತ ಹೀಗೆ ತರತರಹದ ವೇಷಗಳು ಬಂದು ಹೋಗುತ್ತಿದ್ದವು. ಕೆಲವು ಸ್ತ್ರೀವೇಷಗಳು ಕೂಡಾ ಇದ್ದವು. ಅವುಗಳನ್ನು ನೋಡುತ್ತಿದ್ದಂತೆ ಅವನಲ್ಲಿ ಉತ್ಸಾಹ ತುಂಬಿಕೊಳ್ಳ ತೊಡಗಿತು. ಗಿರಣಿಯವ ಅವನನ್ನು ಕರೆದು ಹಿಟ್ಟನ್ನು ಕೊಂಡೊಯ್ಯುವಂತೆ ತಿಳಿಸಿದ. ದುಡ್ಡು ಕೊಟ್ಟು ಹೊರಗೆ ಬಂದ ಗೋವಿಂದನಿಗೆ ದಾರಿ ನಡುವೆ ಒಂದು ಮನೆಯ ಮುಂದೆ ನಿಲ್ಲಿಸಿದ ಕಾಮನ ಬೊಂಬೆ ದೃಷ್ಟಿಗೆ ಬಿತ್ತು. ಅವನಿಗೆ ಆಶ್ಚರ್ಯವಾಯಿತು. ಗಿರಣಿಗೆ ಹೋಗುವಾಗ ನಾನು ಕಾಣಲಿಲ್ಲವಲ್ಲ? ಅಂದ್ರೆ ಈಗಷ್ಟೇ ಅದನ್ನು ತಂದು ನಿಲ್ಲಿಸಿರಬೇಕು.

ನಾನೂ ಒಂದು ಕಾಮನ ಬೊಂಬೆ ಮಾಡಬಾರದು ಯಾಕೆ? ಮಾಡಲೇ
ೇಕು. ತಕ್ಷಣ ಹಿಂತಿರುಗಿ ಹೋದರೆ ಬೇಗ ಮಾಡಬಹುದು. ವಾಡೆಯ
ೊಂಬೆ ಸುಡುವಾಗ ನನ್ನ ಗೊಂಬೆಯನ್ನು ಕೂಡಾ ಸುಡಬಹುದು. ನನ್ನದೇ
ೊಂಬೆ ಇರುವಾಗ ಸಂಜೆ ಅರಳಿಮರದ ಬಳಿ ಹೋಗುವ ಆವಶ್ಯಕತೆ
ಲ್ಲ. ಅವನು ಉತ್ಸಾಹದಿಂದ ವೇಗವಾಗಿ ನಡೆಯತೊಡಗಿದ.

ಮನೆ ತಲುಪಿದ ಕೂಡಲೇ ಬಚ್ಚಲಿಗೆ ಹೋಗಿ ಸ್ನಾನ ಮುಗಿಸಿ ಬಂದ.
ೀಗ ಸ್ನಾನ ಮಾಡಿದ್ದು ಒಳ್ಳೆಯದೇ ಆಯಿತು. ಆಮೇಲೆ ಊಟ ಮಾಡಿ
ಧಾನವಾಗಿ ಕೂತು ಗೊಂಬೆ ಮಾಡಬಹುದು. ಅರಿಶಿನ ಅರೆದು ಅದರಲ್ಲಿ
ುಣ್ಣ ಕಲೆಸಿ ಕೆಂಪು 'ಪೇಸ್ಟ್' ಮಾಡಬೇಕು. ಅಯ್ಯೋ ಒಂದೆರಡಲ್ಲ ಸಾವಿರ
ಲಸವಿದೆ!

ಸ್ನಾನ ಮಾಡಿ ಬಂದವನೇ ಅಡುಗೆ ಮನೆಗೆ ಹೋಗಿ ಮಣೆ ಹಾಕಿ
ುಳಿತುಕೊಂಡ.

"ಅಮ್ಮಾ ಊಟ ಬಡಿಸು"

"ಊಟ! ಗಂಟೆ ಎಷ್ಟಾಯ್ತು? ಇನ್ನೂ ಅಡುಗೆ ಆಗಲಿಲ್ಲವಲ್ಲ"

"ಅಮ್ಮಾ ಹಸಿವಾಗಿದೆ. ಊಟದ ನಂತರ ನನಗೆ ಕೆಲಸ ಇದೆ"

"ಏನು ಕೆಲಸ?"

"ನಾನು ಕಾಮನ ಗೊಂಬೆ ಮಾಡಬೇಕು"

"ಏನು ಕಾಮನ ಗೊಂಬೆಯಾ! ಊರಿನಲ್ಲಿ ಇರುವ ಕಾಮನ
ೊಂಬೆಗಳು ಸಾಕಾಗಲಿಲ್ಲವೆಂದು ನೀನು ಬೇರೆ ಮಾಡಲು ಹೊರಟಿದ್ಯಾ?
ನು ಕತೆ?"

ಅವನು ಒಮ್ಮೆಲೇ ದೊಡ್ಡ ಧ್ವನಿ ತೆಗೆದು "ಅಮ್ಮಾ ನಿನ್ನ ಹಿಂದೆ
ಯಾರಿದ್ದಾರೆ ನೋಡು"

"ಯಾರು?"ಅವಳು ತಿರುಗಿ ನೋಡಿದರೆ ಅಲ್ಲಿ ಯಾರೂ ಇಲ್ಲ.

"ಕಾಮ ಕಣಮ್ಮಾ, ಕಾಮ!" ಗೋವಿಂದ ಚಪ್ಪಾಳೆ ತಟ್ಟಿ ನಕ್ಕ. ಅವಳಿಗ
ನಗು ಬಂತು. ಓಕುಳಿಯ ದಿನಗಳಲ್ಲಿ ಇದೊಂದು ರೂಢಿಯೇ ಇದೆ. ಯಾರ
ಆದರೂ ಮಾತನಾಡುವಾಗ "ಯಾರು" "ಏನು" ಈ ರೀತಿಯ ಪ್ರಶ್ನೆ ಕೇಳಿದರ
'ಕಾಮ' ಎಂದು ಉತ್ತರ ನೀಡಿ ಪ್ರಶ್ನೆ ಹಾಕಿದವರನ್ನು ಮೂರ್ಖರಾಗಿಸಬಹುದು
ಆದರೂ ಗೋವಿಂದನ ತಾಯಿ ಸಿಟ್ಟು ಬಂದ ಹಾಗೆ ನಟಿಸುತ್ತಾ ಅವನ
ಬೈದಳು,

"ಕೆನ್ನೆಗೆ ಪೆಟ್ಟು ತಿಂತಿ ನೋಡು. ದೊಡ್ಡವರಿಗೇ 'ಕಾಮ'ನನ್ನು ತಿನ್ನಿಸು
ಏನು?"

"ಹಾಗಿದ್ದರೆ ನನಗೆ ಬಡಿಸು!" ತಾಯಿ ಅವನಿಗೆ ಊಟ ಬಡಿಸಿದರು
ಅವನು ತಿನ್ನುತ್ತ ಹೇಳಿದ,

"ನಾನು ಇವತ್ತು ವಾಡೆಯ ಹತ್ತಿರ ಹೋಗುವುದಿಲ್ಲ"

"ಯಾಕೆ?"

"ನಾನು ಗೊಂಬೆ ಮಾಡಿ ಇಲ್ಲಿಯೇ ಸುಟ್ಟು ಬಿಡುತ್ತೇನೆ"

"ನೀನೋ ನಿನ್ನ ಗೊಂಬೆಯೋ!" ಅವಳು ನಕ್ಕಳು. "ಇಲ್ಲಿ ನೀನ
ಇದ್ದ ಮೇಲೆ ಬೇರೆ ಗೊಂಬೆ ಯಾಕೋ?"

ಗೋವಿಂದನಿಗೆ ಸಿಟ್ಟು ಬಂತು. ತಡವಾಗಿಬಿಟ್ಟಿದೆ. ಕೆಲಸ ಈಗಲ
ಶುರುಮಾಡಬೇಕು. ಮೊದಲು ಗೊಂಬೆಯ ಅಸ್ಥಿಪಂಜರ ಮಾಡಿಕೊಳ್ಳಬೇಕು
ಎರಡು ದಿನ ಹಿಂದೆಯೇ ಮಾಡಿಟ್ಟಿದ್ದರೆ ಚೆನ್ನಾಗಿತ್ತು. ಆದರೆ ಈ ಆಲೋಚ
ಆಗ ಇರಲಿಲ್ಲವಲ್ಲ. ಏನಾಯಿತು, ಈಗಲೂ ಬೇಗ ಮಾಡಿ ಮುಗಿಸಿದರಾಯಿತು
ನನ್ನ ಗೊಂಬೆ ಒಟ್ಟು ನಾಲ್ಕು ಗಂಟೆಗಳ ಕಾಲ ಇರುತ್ತದೆ. ಮುಸ್ಸಂಜೆ ಹೊತ್ತ
ಅದಕ್ಕೆ ಬೆಂಕಿ ಕೊಡಬೇಕಾಗುತ್ತದೆ.

ಗೋವಿಂದ ಹೊರಗೆ ಹೋಗಿ ಒಂದು ಉದ್ದ ಕೋಲನ್ನು ಹುಡು
ತಂದ. ಅಮ್ಮ ಇಲ್ಲದಿದ್ದಾಗ ಒಳಗೆ ಹೋಗಿ ಹಳೆ ವಸ್ತ್ರಗಳನ್ನು ತಂದು
ಕೋಲಿಗೆ ಸುತ್ತಿ ಅದರ ದೇಹ ರಚಿಸುವ ಕಾರ್ಯದಲ್ಲಿ ಮಗ್ನನಾದ. ಮ

ಸೆಯೊಳಗೆ ಹೋಗಿ ಪೆಟ್ಟಿಗೆ ತೆರೆದು ಹುಡುಕಾಡಿ ತಂದೆಯ ಹಳೆ ಶರ್ಟು
ಡಿದು ಬರುವಾಗ ಅಮ್ಮ ನೋಡಿದಳು.

“ಗೋವಿಂದಾ, ಏನೋ ಅದು ಕೈಯಲ್ಲಿ?”

“ಅಪ್ಪನ ಹಳೇ ಅಂಗಿ. ಗೊಂಬೆ ಮಾಡಲಿಕ್ಕೆ”

“ಗೊಂಬೆಗೆ ಆ ಶರ್ಟ್! ಏನೂ ಬೇಡ. ಇಲ್ಲಿ ತಾ. ಅದಿನ್ನೂ
ಸದಾಗಿಯೇ ಇದೆ. ಅಲ್ಲಿಯೇ ಇಟ್ಟುಬಿಡು”

ಗೋವಿಂದನಿಗೆ ಅಳು ಬಂತು. ಅವನು ಅಳುಧ್ವನಿಯಲ್ಲಿಯೇ ಆ
ರ್ಟ್ ಬೇಡಿದ. ಅವಳು ಕಷ್ಟಪಟ್ಟು ಹುಡುಕಿ ಇನ್ನೂ ಹೆಚ್ಚು ಹರಿದ ಶರ್ಟ್
ಂದು ಕೊಟ್ಟಳು. ಅದನ್ನು ಕೋಲಿಗೆ ತೊಡಿಸಿದ. ಶರ್ಟ್ ತೊಟ್ಟ ಗೊಂಬೆ
ಂದವಾಗಿ ಕಾಣುತ್ತಿತ್ತು. ಆದರೆ ಕೋಲಿಗೆ ಇನ್ನಷ್ಟು ಬಟ್ಟೆಗಳನ್ನು ಸುತ್ತಬೇಕಿತ್ತು.
ದರೆ ಒಂದು ಒಳ್ಳೇಯದಾಯಿತು. ಅಮ್ಮ ಕೊಟ್ಟ ಶರ್ಟ್ ತುಂಬು
ಳಿನದು. ಹೀಗಾಗಿ ಕೈಗೆ ಬೇರೆ ಕೋಲು ಹುಡುಕುವ ಆವಶ್ಯಕತೆ
ಳಲಿಲ್ಲ. ಆದರೆ ಮೈ ಭಾಗಕ್ಕೆ ಇನ್ನೂ ಬಟ್ಟೆ ಹಿಡಿಯುತ್ತಿತ್ತು. ಅವನಿಗೆ
ಂದು ಉಪಾಯ ಹೊಳೆಯಿತು. ಹಟ್ಟಿಗೆ ಹೋಗಿ ಹಸುಗಳಿಗೆ ತಂದಿಟ್ಟ
ಣಹುಲ್ಲು ತಂದು ತುಂಬುವುದು! ಅವನು ಹಾಗೇ ಮಾಡಿದ. ಹುಲ್ಲು
ಂಬಿದ ಶರ್ಟ್‌ನಿಂದಾಗಿ ಅದು ಮನುಷ್ಯನ ದೇಹದ ಹಾಗೆ
ಣಲಾರಂಭಿಸಿತು. ಇನ್ನು ಕಾಲು ಮತ್ತು ತಲೆ ಮಾಡುವುದು ಬಾಕಿ ಉಳಿದಿದೆ.
ಳೆಬಟ್ಟೆಗಳು ತುಂಬಾ ಬೇಕು. ಪ್ಯಾಂಟ್ ಇದ್ದರೆ ಕಾಲಿನ ಸಮಸ್ಯೆ ಇರುವುದಿಲ್ಲ.
ದರೆ ಇಲ್ಲಿ ಪ್ಯಾಂಟ್ ಎಲ್ಲಿದೆ! ಈಗಾಗಲೇ ಕೋಲಿಗೆ ಸುತ್ತಿರುವ ಬಟ್ಟೆಗಳನ್ನು
ಚ್ಚಿ ತೆಗೆದರೆ ಹೇಗೆ? ಅವನು ಹಾಗೇ ಮಾಡಿದ. ಶರ್ಟ್ ಬಿಚ್ಚಿ, ಸುತ್ತಿದ
ಟ್ಟೆ ತೆಗೆದು ಒಂದೆಡೆ ಇಟ್ಟ. ಆಮೇಲೆ ಮೇಲ್ಭಾಗದಲ್ಲಿ ಒಂದು ಕೋಲು,
ಲಿನ ಭಾಗದಲ್ಲಿ ಎರಡು ಕೋಲುಗಳನ್ನು ಕಟ್ಟಿದ. ಆಮೇಲೆ ಶರ್ಟ್
ರಿಸಿ ಹಿಂದಿನಂತೆ ಅದರಲ್ಲಿ ಹುಲ್ಲು ತುಂಬಿಟ್ಟ. ಕಾಲಿಗಾಗಿ ಕಟ್ಟಿದ
ಲುಗಳಿಗೆ ಬಟ್ಟೆ ಸುತ್ತಿದ. ಶರ್ಟಿನ ಕಾಲರನ್ನು ನೆಟ್ಟಗೆ ಮಾಡಿ ಅಲ್ಲಿ ಬಟ್ಟೆ
ತ್ತಿ ತಲೆ ಮಾಡಿದ. ಇನ್ನು ಮುಖದ ಚಿತ್ರ ಬಿಡಿಸಿ ಗೊಂಬೆಗೆ ಅಂಟಿಸಿದರೆ
ಲಸ ಮುಗಿಯಿತು.

ಗೋವಿಂದ ತನ್ನ ಗೊಂಬೆಯನ್ನು ಎತ್ತಿ ನಿಲ್ಲಿಸಿದ. ನೆಟ್ಟಗೆ ನಿಲ್ಲಲ
ಅದಕ್ಕೆ ಶಕ್ತಿ ಇದೆ ತಾನೇ? ಕುತ್ತಿಗೆ, ಕೈಗೆ ಕಟ್ಟಿದ ಗಂಟು ಸಡಲಿಸಿ ಬಿದ್ದುಬಿಟ್ಟರೆ
ಇಲ್ಲ, ಚೆನ್ನಾಗಿದೆ. ಗಟ್ಟಿಯಾಗಿದೆ. ಇನ್ನು ಮುಖ ಬಿಡಿಸಿ ಅಂಟಿಸಿದರಾಯಿತು
ಈಗ ಚಿತ್ರ ಬಿಡಿಸಲು ರಟ್ಟು ಬೇಕು ಅಥವಾ ದಪ್ಪ ಕಾಗದ. ಅದೆಲ್ಲಿ ಸಿಗಬಹುದು

ದೂರದಿಂದ ಗುಮಟೆಯ ಸದ್ದು ಕೇಳಿಬಂತು. ಗೋವಿಂದ ಚಕಿತನಾದ
ಗಂಟೆ ಎರಡು ಅಥವಾ ಮೂರು ಆಗಿರಬೇಕು. ಈ ಕೆಲಸ ಬೇಗನೆ
ಮುಗಿಯಬೇಕು. ಈಗ ವೇಷಗಳೆಲ್ಲಾ ವಾಡೆಯ ಕಡೆಗೆ ನಡೆದು ಒಟ್
ಸೇರುತ್ತಿರಬಹುದು. ಸ್ವಲ್ಪ ಹೊತ್ತಿನಲ್ಲಿ ಕುಣಿತ ಶುರುವಾಗಬಹುದು. ಅ
ಹೋಗಬೇಕಾ? ಆಂ ಹೋದರಾಯಿತು, ನೋಡೋಣ. ಗೊಂಬೆಯನ್
ಪೂರ್ತಿ ಮಾಡಿ ತಂದಿರಬಹುದೇ? ಅರಿಶಿನ ಅರೆದು ಸಂತ
ಹೋದರಾಯಿತಲ್ವಾ, ಅಲ್ಲಿಯ ಹುಲಿ ಕುಣಿತ ತಪ್ಪಿಸುವ ಹಾಗಿಲ್ಲ. ಆದ
ಈ ಕೆಲಸ ಮುಗಿದಿಲ್ಲವಲ್ಲಾ. ಏನು ಮಾಡಲಿ? ಮುಖಕ್ಕೆ ಎಲ್ಲಿದೆ ದ
ಕಾಗದ? ಹುಡುಕೋಣವೇ?

ಅವನು ಮನೆಯೊಳಗೆ ಹೋದ. ಕಾರ್ಡ್ ಬೋರ್ಡೋ, ದ
ಕಾಗದವೋ ಯಾವುದೋ ಒಂದು ಬೇಕು. ಅವನು ಹುಡುಕಲು ಪ್ರಾರಂಭಿಸಿದ
ಅಲ್ಲಿಯೇ ಮಲಗಿಕೊಂಡಿದ್ದ ಅಮ್ಮ ಕೇಳಿದಳು.

"ಏನೋ ಮಾಡುತ್ತಿದ್ದಿ, ಏನದು ಹುಡುಕುವುದು?"

"ನನಗೆ ಒಂದು ದಪ್ಪ ಕಾಗದ ಬೇಕು ಅಥವಾ ಕಾರ್ಡ್ ಬೋರ್ಡ್
ಸಿಕ್ಕಿದರೂ ನಡೆಯುತ್ತೆ. ಎಲ್ಲಿ ಸಿಗುತ್ತಮ್ಮ?"

"ನನಗೇನು ಗೊತ್ತು?"

"ಹೇಳಮ್ಮಾ"

"ಹುಡುಕು ಮಗಾ, ನಾನು ಸ್ವಲ್ಪ ಹೊತ್ತು ಮಲಗಿಕೊಳ್ಳುತ್ತೇನೆ"

ಅವನು ಹುಡುಕುತ್ತಾ ಹೋದ. ಆದರೆ ಅವನಿಗೆ ಬೇಕಾದ ರೀತಿಯ
ಕಾಗದ ಮಾತ್ರ ಸಿಗಲೇ ಇಲ್ಲ. ಇನ್ನು ಒಂದೇ ಕೋಣೆ ಬಾಕಿ ಉಳಿದಿದ

ಅಲ್ಲಿ ಅಪ್ಪ ಮಲಗಿದ್ದಾರೆ. ಆ ಕೋಣೆಯಲ್ಲಿರುವ ಅಲಮಾರಿಯಲ್ಲಿ ಹಳೆಪುಸ್ತಕಗಳು ಇವೆ. ಅವರಲ್ಲಿ ಒಂದು ಪುಸ್ತಕದ ಬೈಂಡ್ ಹರಿದು ತೆಗೆದರಾಯಿತು. ಗೋವಿಂದನಿಗೆ ಭಯವೆನಿಸಿತು. ಅಲ್ಲಿ ತಂದೆ ಮಲಗಿದ್ದಾರೆ. ಅವರ ಮೈ ಕಂಡಾಪಟ್ಟೆ ಊದಿಕೊಂಡಿದೆ. ನಾನು ಹತ್ತಿರ ಹೋದರೆ ಅವರು ನನ್ನನ್ನು ಬೈಯ್ಯುವುದು ಖಂಡಿತ. ಅದಕ್ಕಿಂತಲೂ ಕೈ ತಾಗಿದರೇ ಆ ಅಲಮಾರಿ ಇಡೀ ಅಲುಗಾಡುತ್ತದೆ. ಯಾವಾಗ ಬೀಳುತ್ತೋ ಯಾರಿಗ್ಗೊತ್ತು? ಮೈಮೇಲೇನಾದರೂ ಬಿದ್ದುಬಿಟ್ಟರೆ ಸತ್ತರೆಂದೇ ಲೆಕ್ಕ. ಅದರ ಒಂದೊಂದು ಹಲಗೆ ಹತ್ತು ಮಣ ಭಾರ. ಅದರಲ್ಲಿರುವ ಪುಸ್ತಕ ತೆಗೆದು ಬೈಂಡ್ ಹರಿದುಕೊಳ್ಳುವುದೆಂದರೆ ಜೀವಕ್ಕೆ ಬರುತ್ತದೆ. ಇನ್ನು ಆ ಪುಸ್ತಕವನ್ನು ತೆಗೆಯುವುದಾದರೂ ಹೇಗೆ? ಅಲಮಾರಿಗೆ ಬಾಗಿಲು ಇಲ್ಲವೆನ್ನುವುದಂತೂ ಸತ್ಯ. ಆದರೆ ಪುಸ್ತಕವನ್ನು ಇಟ್ಟಿರುವುದು ಮೇಲಿನ ಹಲಗೆಯಲ್ಲಿ. ಅಲ್ಲಿವರೆಗೆ ಕೈ ಎಟುಕುವುದಿಲ್ಲ. ಏನು ಮಾಡಲಿ?

ಆದರೆ, ಎಲ್ಲಕ್ಕಿಂತ ಕಾಗದದ ಆವಶ್ಯಕತೆ ಹೆಚ್ಚು ಮಹತ್ವದ್ದು. ಸಮಯವೂ ಹೆಚ್ಚಿಲ್ಲ. ಗೋವಿಂದ ಆ ಕೋಣೆಯೊಳಗೆ ಪ್ರವೇಶಿಸಿದ. ತಂದೆ ಮಲಗಿದ್ದರು. ಬಾತಿರುವ ಅವರ ಮುಖ ಇಷ್ಟಗಲವಾಗಿತ್ತು. ಅದನ್ನು ನೋಡಿಯೇ ಗೋವಿಂದನಿಗೆ ಹೆದರಿಕೆಯಾಯಿತು. ಒಂದು ವಿಧದ ಭಾವನೆ ಕಾಡಿತು: ಅಪ್ಪನಿಗೆ ಬೇರೆ ಕೋಣೆಯಲ್ಲಿ ಮಲಗಬಹುದಿತ್ತಲ್ಲ. ಅವರು ಇಲ್ಲಿ ಮಲಗದೇ ಇದ್ದಿದ್ದರೆ ಕುರ್ಚಿ ಅಥವಾ ಸ್ಟೂಲ್ ಎಳೆದು ಅದರ ಮೇಲೆ ಹತ್ತಿ ಪುಸ್ತಕದ ಬೈಂಡ್ ಹರಿಯುವುದು ಸಾಧ್ಯವಿತ್ತು. ಈಗ ಪುಸ್ತಕವನ್ನು ಹೇಗೆ ತೆಗೆಯಲಿ?

ಗೋವಿಂದ ಸುತ್ತಲೂ ದೃಷ್ಟಿ ಓಡಿಸಿದ. ಆ ಅಲಮಾರಿ ಇರುವಲ್ಲಿ ಒಂದು ಬಾಗಿಲು ಇದೆ. ಅದರ ಮೇಲೆ ಹತ್ತಿ ನಿಂತು ಪುಸ್ತಕ ತೆಗೆಯಬಹುದು. ಅವನು ಉತ್ಸಾಹದಿಂದ ಬಾಗಿಲು ಹಿಡಿದು ಹತ್ತಬೇಕು ಎನ್ನುವಷ್ಟರಲ್ಲಿ ಬಾಗಿಲಿನ ಸದ್ದು ಕೇಳಿ ತಂದೆಗೆ ಎಚ್ಚರವಾಯಿತು.

"ಯಾರದು?" ತಂದೆಯ ಧ್ವನಿ ಗೋವಿಂದನಿಗೆ ಕೇಳಿಸಿತು. ಅವನು ಮೌನವಾಗಿ ನಿಂತುಕೊಂಡ. ಅವನ ಎದೆ ಡವಡವ ಹೊಡೆದುಕೊಳ್ಳುತ್ತಿತ್ತು.

ತಂದೆ ಮಲಗಿರಬಹುದು ಎಂದುಕೊಂಡು ಅವನು ಬಂದಿದ್ದ. ಆದರೆ ಅವರು ಎಚ್ಚರವಾಗಿದ್ದಾರೆ!

"ಯಾರೋ ಅದು, ಆಂ?" ಅವನು ಮತ್ತೊಮ್ಮೆ ತಂದೆಯ ದುರ್ಬಲ ಧ್ವನಿ ಕೇಳಿದ.

"ನಾನು"

"ಇಲ್ಲೇನು ಮಾಡ್ತಾ ಇದ್ದಿ?"

"ಏನಿಲ್ಲ"

"ಹೊರಗೆ ಹೋಗು"

ಗೋವಿಂದ ಕದಲಲಿಲ್ಲ. ಅವನಿಗೆ ಸಿಟ್ಟು ಬಂತು. ಈ ಅಪ್ಪನಿಗೆ ಸುಮ್ಮನೆ ಬಿದ್ದುಕೊಳ್ಳಬಾರದಾ? ಇವನು ಥೇಟ್ ಒಬ್ಬ 'ಗೊಂಬೆ'ಯೇ. ಮೊದಲೇ ಹುಷಾರಿಲ್ಲ. ಅದರೂ ಅದನ್ನು ಮರೆತು ಬಿಟ್ಟಿದ್ದಾನೆ. ಹಾಗೇ ಆಗಬೇಕು ಅಪ್ಪನಿಗೆ–ಇಡೀ ಮೈ ಊದಿಕೊಂಡಿದೆ. ಇನ್ನಷ್ಟು ಊದಿಕೊಳ್ಳಲಿ!

ಗೋವಿಂದ ತುಸು ಹೊತ್ತು ಅಲುಗಾಡದೆ ಹಾಗೇ ನಿಂತುಕೊಂಡ. ಅಪ್ಪ ಮಲಗಿದಂತೆ ಕಾಣುವುದಿಲ್ಲ. ಪುಸ್ತಕ ತೆಗೆಯಲು ಕೈಯನ್ನು ಉದ್ದಕ್ಕೆ ಚಾಚಿದ. ಇನ್ನೇನು ಪುಸ್ತಕ ಕೈಗೆ ಎಟಕಿತು ಎನ್ನುವಷ್ಟರಲ್ಲಿ ಬಾಗಿಲಿನ ಹಿಡಿ ಸದ್ದು ಮಾಡಿತು. ಅಪ್ಪನ ಏರುಧ್ವನಿ ಕೇಳಿಬಂತು –

"ಯಾರೋ ಅವನು? ಆಂ? ನಿನಗೆ ಹೇಳಿದ್ದು ಕೇಳಿಸಲಿಲ್ವಾ? ತೊಲಗೋ ಇಲ್ಲಿಂದ, ತೊಲಗು "

ಅವರು ಮಲಗಿದ್ದಲ್ಲಿಂದ ಮುಖವೆತ್ತಿ ನೋಡಲು ಪ್ರಯತ್ನಿಸಿದಾಗ ಗೋವಿಂದ ಗಾಬರಿಗೊಂಡ. ತಾನು ಬಾಗಿಲಿನ ಮೇಲೆ ಹತ್ತಿ ನಿಂತಿರುವುದು ಅವನಿಗೆ ಮರೆತೇ ಹೋಯಿತು. ಓಡಬೇಕೆಂದು ಕಾಲನ್ನು ಮೇಲಕ್ಕೆತ್ತಿದಾಗ ಬಾಗಿಲು ಸರ್ರನೆ ತಿರುಗಿ ಅಲಮಾರಿಗೆ ಬಡಿಯಿತು. ಏನಾಯಿತೆಂದು ತಿಳಿಯುವ ಮೊದಲೇ ಅಲಮಾರಿ ಕುಸಿದು ತಂದೆಯ ಎದೆ ಮೇಲೆ ಬಿದ್ದುಬಿಟ್ಟಿತು. ಇಬ್ಬರೂ ದೊಡ್ಡದಾಗಿ ಕಿರಿಚಿಕೊಂಡರು.

ಅಮ್ಮ, ವಿಮಲ, ನೆರೆಮನೆಯವರು ಎಲ್ಲಾ ಓಡಿಬಂದರು. ಎಲ್ಲಾ
ೕರಿ ಅಲಮಾರಿಯನ್ನು ಎತ್ತಿ ನಿಲ್ಲಿಸಿದರು. ಬಿದ್ದ ಪುಸ್ತಕಗಳನ್ನೆಲ್ಲಾ ಗುಡ್ಡೆ
ಾಕಿದರು. ತಾಯಿಯ ದೃಷ್ಟಿ ಪುಸ್ತಕ ಹಿಡಿದು ನಿಂತಿರುವ ಗೋವಿಂದನ
ಡೆಗೆ ಹರಿಯಿತು.

"ಇಲ್ಲಿ ಬಾರೋ, ಶನಿಮುಂಡೇದೆ. ನಿನ್ನ...ಕಾಗದ, ನಿನ್ನ
ಾಗದ..ನಿನಗೆ..."ಅವಳಿಗೆ ಮಾತು ಹೊರಡದಂತಾಯಿತು. ಅವನನ್ನು ಹಿಡಿದು
ಟ್ಟಿನಿಂದ ಕೈಗೆ ಸಿಕ್ಕಿದ ವಸ್ತುಗಳಿಂದ ಹೊಡೆಯಲಾರಂಭಿಸಿದಳು. ಯಾರೋ
ಂದು ಅವಳನ್ನು ತಡೆದು ಗೋವಿಂದನನ್ನು ಹೊರಗೆ ಕಳುಹಿಸಿದರು.
ವನು ಗೊಣಗಾಡುತ್ತಾ ಹೊರಗೆ ಹೋದ. ಆ ಅಲಮಾರಿ ಕೆಳಗೆ ಬಿದ್ದು
ುರಿದದ್ದು, ಅಮ್ಮನಿಂದ ಪೆಟ್ಟು ತಿಂದದ್ದು ಯಾವುದೂ ಅವನನ್ನು ಬಾಧಿಸಲಿಲ್ಲ.
ವನಿಗೆ ಸಿಟ್ಟು ಇದ್ದುದು ಬರೀ ಅಪ್ಪನ ಮೇಲೆ ಮಾತ್ರ. ಹೀಗೆಲ್ಲಾ
ಡೆಯುವುದಕ್ಕೆ ಅವರೇ ಕಾರಣ. ಅಪ್ಪನಿಗೆ ಅಲ್ಲಿ ಮಲಗು ಅಂತ ಹೇಳಿದವರು
ಯಾರು? ಇನ್ನು ಅಲ್ಲಿ ಮಲಗಿದ್ದರೂ ಬಾಯಿ ಮುಚ್ಚಿ ಇರಬಹುದಿತ್ತಲ್ಲ?
ಅವರು ನನಗೆ ಬೈದದ್ದು ಯಾಕೆ? ಹೊರಗೆ ಹೋಗು, ಹೊರಗೆ ಹೋಗು
ಅಂತ ಹೇಳೋಕೆ ನಾನೇನು ಕಳ್ಳನೇ? ನಾನು ಅವರ ಮಗನಲ್ಲವೇ! ಎಂಥಾ
ಅಪ್ಪನೋ ಇವನು? ಶುದ್ಧ ಗೊಂಬೆ!

ಗೋವಿಂದನ ತಲೆಯಲ್ಲಿ ತಂದೆ ಗೊಂಬೆಯಾಗಿ ಎದ್ದು ನಿಂತ. ಪುಸ್ತಕದ
ಬೈಂಡ್ ಹರಿದು ಅದರಲ್ಲಿ ಅಪ್ಪನ ಚಿತ್ರ ಬರೆದು ತನ್ನ ಗೊಂಬೆಯ ಮುಖಕ್ಕೆ
ಅಂಟಿಸಬೇಕೆಂದು ನಿರ್ಧರಿಸಿದ. ತಕ್ಷಣ ಬೈಂಡ್ ಕಿತ್ತು ತೆಗೆದ. ಮಸಿ ಮತ್ತು
ಬಣ್ಣ ತಂದು ಅದರಲ್ಲಿ ಮುಖ ಬಿಡಿಸತೊಡಗಿದ. ಮನಸ್ಸಿನಲ್ಲಿಯೇ ತಂದೆಯ
ಮೂಗು. ಕಣ್ಣು, ಕಿವಿ, ತುಟಿ ಮತ್ತು ಗಡ್ಡ–ಮೀಸೆಯನ್ನು ನೆನಪಿಸಿಕೊಳ್ಳುತ್ತಾ
ಚಿತ್ರ ಬರೆದ. ಆ ಮುಖ ಅಪ್ಪನ ಮುಖದ ಹಾಗೆ ಇರುವುದು ಅವನ
ಗಮನಕ್ಕೆ ಬಂತು. ಅದನ್ನು ಅವನು ಗೊಂಬೆಗೆ ಅಂಟಿಸುವಾಗ ನೆರೆಮನೆಯವರು
ಹೊರಗೆ ಬರುತ್ತಿದ್ದರು. ಗೋವಿಂದನನ್ನು ನೋಡಿ ಅವರಲ್ಲಿ ಒಬ್ಬ ಹೇಳಿದ,

"ಈಗಿನ ಮಕ್ಕಳೇ ಹೀಗೆ, ಜೀವ ತಿನ್ನುವವರು. ಅಪ್ಪ ಅಮ್ಮನನ್ನು
ಕೊಲ್ಲುವ ಪೈಕಿ. ಅಬ್ಬಾ!"

ಆ ಮಾತಿಗೆ ಗೋವಿಂದ ಗಮನವನ್ನೇ ಕೊಡಲಿಲ್ಲ. ಅವನು ಪೂರ್ಣ
ವಾದ ಗೊಂಬೆಯನ್ನು ಎದ್ದು ನಿಲ್ಲಿಸಿ ಹಿತ್ತಿಲಿನ ಮರವೊಂದಕ್ಕೆ ಕಟ್ಟುವುದರಲ್ಲಿ
ತಲ್ಲೀನನಾಗಿದ್ದ.

ಅಷ್ಟರಲ್ಲಿ ಗುಮಟೆಯ ಸದ್ದು ಜೋರಾಗಿ ಕೇಳಿ ಬರತೊಡಗಿತು.
ಹೊತ್ತಾಯಿತು! ಅಲ್ಲಿ ಕುಣಿತ ಪ್ರಾರಂಭವಾಗಿರಬೇಕು. ಇನ್ನೇನು ಒಂದು
ಗಂಟೆಯೊಳಗೆ ಎಲ್ಲವೂ ಮುಗಿದುಬಿಡುತ್ತದೆ. ಆಮೇಲೆ ಗೊಂಬೆಯನ್ನು
ಸುಡುವುದೇ. ಗೋವಿಂದನಲ್ಲಿ ಅಲ್ಲಿಗೆ ಹೋಗುವ ಬಯಕೆ ಹುಟ್ಟಿತು.
ಹೋಗಬಹುದು. ನಾನೂ ಗೊಂಬೆಯನ್ನು ಮಾಡಿ ಮುಗಿಸಿದ್ದೇನೆ. ಇನ್ನು
ಅರಿಶಿನ ಅರೆಯುವುದಷ್ಟೇ ಬಾಕಿ ಉಳಿದಿದೆ. ಅದು ಮುಗಿದರೆ ಹೋಗಬಹುದು.

ಅವನು ಅರಿಶಿನ ತರಲು ಮನೆಯೊಳಗೆ ಹೋದ. ಅಲ್ಲಿ ಅಮ್ಮ
ಬಿಕ್ಕಿಬಿಕ್ಕಿ ಅಳುವುದನ್ನು ನೋಡಿ ಅವನಿಗೆ ಆಶ್ಚರ್ಯವಾಯಿತು. ಕೆಟ್ಟದೆನಿಸಿತು.
ಈಗ ಅಳುವುದಕ್ಕೆ ಏನಾಗಿದೆ? ಅವರು ಅವನತ್ತ ಗಮನವನ್ನೇ ಕೊಡಲಿಲ್ಲ.
ಅವನಿಗೂ ಮಾತನಾಡಬೇಕೆಂದು ಅನಿಸಲೇ ಇಲ್ಲ. ಮಾತಿಗೆ ನಿಲ್ಲಲು
ಸಮಯವಾದರೂ ಎಲ್ಲಿದೆ? ಅವನು ಅರಿಶಿನ ಹಿಡಿದು ಹೊರಗೆ ಬಂದ.
ಅದನ್ನು ಅರೆದು ಒಂದು ಎಲೆಯಲ್ಲಿ ಸಂಗ್ರಹಿಸಿದ.

ಈಗ ಅವನಿಗೆ ನೆಮ್ಮದಿಯಾಯಿತು. ಕೆಲಸ ಎಲ್ಲಾ ಮುಗಿಯಿತು.
ಅಮ್ಮನಿಗೆ ಹೇಳುವುದು ಬೇಡ, ಅವಳ್ಯಾಕೆ ನನ್ನನ್ನು ಹೊಡೆದದ್ದು? ಅವಳಿಗೆ
ತಿಳಿಸದೇ ವಾಡೆಯ ಕಡೆಗೆ ಹೋಗುವುದೆಂದು ಬಟ್ಟೆ ಬದಲಾಯಿಸಿದ.

ವಾಡೆಯ ಗೊಂಬೆಯನ್ನು ಸುಡುವಾಗ ಸೂರ್ಯ ಮುಳುಗುವುದರಲ್ಲಿದ್ದ.
ಅಲ್ಲಿ ಸೇರಿದವರೆಲ್ಲಾ ಸ್ನಾನ ಮಾಡಲು ಹೊರಟಾಗ ಗೋವಿಂದ ಮರಳಿ
ಮನೆಗೆ ಬಂದ. ನನ್ನ ಬೊಂಬೆಯನ್ನು ಕೂಡಾ ಸುಡಬೇಕಾಗಿದೆ. ಅವನಿಗೆ
ದುಃಖವಾಯಿತು. ನನ್ನ ಗೊಂಬೆಗೆ ಇದ್ದುದು ಬರೀ ಒಂದು ತಾಸಿನ ಬದುಕು
ಅಷ್ಟೇ. ಆದರೆ ಆ ರೂಪ ಯಾವಾಗಲೂ ತನ್ನ ಜೊತೆಯಲ್ಲಿಯೇ ಇದ್ದಂತೆ
ಭಾಸವಾಯಿತು. ಈಗ ಅದಕ್ಕೆ ಬೆಂಕಿ ಕೊಡಬೇಕಾಗಿದೆ. ಅವನು ಭಾರವಾದ
ಹೃದಯದಿಂದ ಯಾರ ಕಣ್ಣಿಗೂ ಬೀಳದಂತೆ ಅಡುಗೆ ಕೋಣೆಗೆ ಹೋಗಿ

ಉರಿಯುವ ಕೆಂಡ ಹಿಡಿದು ಬಂದ. ಗೊಂಬೆಗೆ ಬೆಂಕಿ ತಗಲಿಸಿದ. ಗೊಂಬೆ ಇಡಿಯಾಗಿ ಬೆಂಕಿಯಲ್ಲಿ ಉರಿಯುತ್ತಿರುವುದನ್ನು ನೋಡಿ ಅವನಿಗೆ ಅಳುವೇ ಬಂದುಬಿಟ್ಟಿತು. ಗೊಂಬೆ ಉರಿದು ಬೂದಿಯಾದಾಗ ಅವನಲ್ಲಿ ಏಕಾಂಗಿ ಭಾವ ಮುತ್ತಿಕೊಂಡಿತು.

"ಇದ್ದ ಗೊಂಬೆಯೊಂದು ಸತ್ತುಹೋಯಿತಲ್ಲ, ದೇವರೇ!"

ಭಾರವಾದ ಕಾಲುಗಳನ್ನು ಎಳೆಯುತ್ತಾ ಅವನು ಮನೆಯೊಳಗೆ ಹೋದ. ಆಗ ಅವನಿಗೆ ನೆರೆಮನೆಯವರು ಮತ್ತೆ ಬಂದಿರುವುದು ಗಮನಕ್ಕೆ ಬಂತು. ಇವರು ಇಲ್ಲಿಗೇಕೆ ಬಂದಿದ್ದಾರೆ? ಅವನು ಒಬ್ಬನ ಮುಖ ನೋಡಿದ. ಆ ಮನುಷ್ಯ ಗೋವಿಂದನಲ್ಲಿ ಹೇಳಿದ,

"ನಿನ್ನ ತಂದೆಯನ್ನು ನೋಡಿದೆಯಾ?"

"ಯಾಕೆ?"

"ನೋಡಿ ಬಾ"

ಗೋವಿಂದ ತಂದೆಯವರ ಕೋಣೆ ಪ್ರವೇಶಿಸಿದ. ತಂದೆ ಮಲ್ಗಿದ್ದಾರೆ. ಅವರನ್ನು ನೋಡುತ್ತಾ ನಿಂತಾಗ ಅವನಿಗೆ ತನ್ನ ಕಾಲಿನ ಕೆಳಗೆ ಏನೋ ಸರಿದಂತಾಯಿತು. ಮುಖ ಕೆಳಗೆ ಹಾಕಿ ನೋಡಿದ- ಇರುವೆಗಳು! ಅವನು ಕಾಲು ಕೊಡವಿದ. ಇರುವೆಗಳು ಚೆಲ್ಲಾಪಿಲ್ಲಿಯಾದವು. ಅದರಲ್ಲಿ ಒಂದೆರಡು ಇರುವೆಗಳು ತಂದೆಯ ಬಳಿ ಸಾರಿದವು. ಗೋವಿಂದ ನೋಡುತ್ತಾ ನಿಂತುಕೊಂಡ. ಆ ಇರುವೆಗಳು ತಂದೆಯ ಕೈಮೇಲಿಂದ ಎದೆಯನ್ನು ಹತ್ತಿ ತುಟಿಯ ಮೂಲಕ ಒಳಗೆ ಹೋದವು. ಅದರ ಹಿಂದಿದ್ದ ಇರುವೆಗಳು ತಮ್ಮ ಸಂಗಾತಿಯ ದಾರಿ ಹಿಡಿದು ಹೋಗುತ್ತಿದ್ದವು. ಗೋವಿಂದನಿಗೆ ಆಶ್ಚರ್ಯವೆನಿಸಿತು-

ಈ ಇರುವೆಗಳು ಅಪ್ಪನ ಬಾಯಿಯೊಳಗೆ ಹೋಗಿ ಏನು ಮಾಡುತ್ತವೆ?



# ಏಕಾಂಗಿ ಸಂಜೆ

ನನ್ನ ಬದುಕಿನಲ್ಲಿ ಅಪರಿಚಿತ ಪುರುಷನೊಬ್ಬನು ಸಹಭಾಗಿಯಾಗಿ ಬಂದಾಗ ಅವನು ನನ್ನ ಆತ್ಮಸಂಗಾತಿಯಾಗಬಹುದೆಂದು ಹೇಳುವುದು ಹೇಗೆ? ನನ್ನಿಂದಂತೂ ಸಾಧ್ಯವಿಲ್ಲ. ನನಗೆ ಅನಿಸುತ್ತಿದೆ, ಅಪರಿಚಿತ ವ್ಯಕ್ತಿಯನ್ನು ವಿವಾಹವಾಗಿ ಅವನೊಂದಿಗೆ ಇರುವಾಗ ಅವನ ಬಲಿಷ್ಠ ಭುಜದ ಮೇಲೆ ಒರಗಿಕೊಂಡಿರುವಾಗಲೂ ನನ್ನ ಆತ್ಮ ಒಂಟಿಯಾಗಿಯೇ ಉಳಿಯುವುದು. ರಕ್ಷಣೆಗಾಗಿ ಕೂಗಿಕೊಳ್ಳುವುದು.

ಸರ್‌ಽ ಽ

ಸಮುದ್ರದ ಅಲೆಗಳು ಹೊರಳುತ್ತಾ ಮುಂದೆ ಬಂದವು. ಸಮಯಕ್ಕೆ ಸರಿಯಾಗಿ ತಲುಪುವ ಶಕ್ತಿ ಉಡುಗಿ ಹೋಗಿ ಅವುಗಳ ಶಿರ ಮರಳಿಗೆ ಅಪ್ಪಳಿಸಿತು. ಯಾರೋ ಕಾಲು ಹಿಡಿದು ಎಳೆದ ಹಾಗೆ ಅವು ಹಿಂದೆ ಸರಿದು ಹೋದವು. ಅವುಗಳ ಬೆನ್ನ ಮೇಲಿಂದ ಹಾದು ಬಂದ ಬೇರೆ ಅಲೆಗಳು ಮುಂದೆ ಸಾಗಲಾಗದೆ ಕಾಲು ಜಾರಿ ಬಿದ್ದುಬಿಟ್ಟವು.

ಪೂ..ಗೀಂ ಽ ಽ

ಇದೆಲ್ಲವನ್ನೂ ಕಾಣುತ್ತಾ ವಾಸಂತಿ ಒಂಟಿಯಾಗಿ ಕುಳಿತಿದ್ದಾಳೆ. ಅವಳ ಎದುರು ಕೌತುಕದಿಂದ ನೋಡುವಂತಹದೇನಿಲ್ಲ. ಈ ಸಮುದ್ರ, ಈ ಅಲೆಗಳು, ಯಾವುದೂ ಅವಳಿಗೆ ಹೊಸದಲ್ಲ. ಅವಳ ಮನೆ ಇರುವುದೇ ಸಮುದ್ರ ತೀರದಲ್ಲಿ. ಮೊದಲ ಶ್ವಾಸದಿಂದ ಹಿಡಿದು ಇವತ್ತಿನವರೆಗೆ ಈ ಸಮುದ್ರ ಮತ್ತು ಇದರ ಅಲೆಗಳನ್ನು ಅವಳು ನೋಡುತ್ತಾ ಬಂದಿದ್ದಾಳೆ. ಅವಳಿಗೆ ಸಮುದ್ರದ ಎಲ್ಲಾ ಭಾವಗಳು, ಎಲ್ಲಾ ರೂಪಗಳು ತಿಳಿದಿವೆ. ಈ ಅಲೆಗಳ ಸದ್ದು ತನ್ನ ಗಂಟಲಿನಿಂದ ಹೊರಡುವ ಧ್ವನಿಯಷ್ಟೇ ಅವಳಿಗೆ ಪರಿಚಿತ.

ಆದರೆ ಪ್ರತಿದಿನ ಅವಳು ಇಷ್ಟೊತ್ತಿಗೆ ಇಲ್ಲಿಗೆ ಬರಲೇಬೇಕು. ಪ್ರತಿಸಂಜೆ ಮನೆಯಿಂದ ಹೊರಟು ಇಲ್ಲಿ ಬಂದು ಕುಳಿತುಕೊಳ್ಳಲೇಬೇಕು. ಯಾಕೆಂದರೆ–

– ಬೇಡ. ಆ ವಿಚಾರ ಬೇಡ. ವಾಸಂತಿ ನಿರ್ಧರಿಸಿದಳು. ಮತ್ತೆ ಆ ಚಿಂತೆಗಳನ್ನು ಹಚ್ಚಿಕೊಳ್ಳುವುದು ನನ್ನಿಂದ ಆಗದು. ನನ್ನ ಮನಸ್ಸನ್ನು ಸ್ವಲ್ಪ ಹೊತ್ತಿನ ಮಟ್ಟಿಗೆ ಮುಕ್ತವಾಗಿ ಇಟ್ಟುಕೊಳ್ಳೋಣ.

ಅವಳು ಎದ್ದು ಮುಂದೆ ಬಂದಳು. ಅಲೆಗಳು ಒದ್ದೆಯಾಗಿಸಿದ ಮರಳು ಇರುವಲ್ಲಿ ಕುಳಿತುಕೊಂಡಳು. ಕಾಲಿನ ಚಪ್ಪಲಿ ತೆಗೆದು ಮರಳಿನ ಮೇಲೆ ಪಾದ ಊರಿದಳು. ಭೋರ್ಗರೆಯುತ್ತಾ ಬರುತ್ತಿದ್ದ ಅಲೆಗಳು ಅವಳ ಕಾಲನ್ನು ಮುಟ್ಟುವಷ್ಟರಲ್ಲಿ ಮಂದವಾಗಿ ಬಿಡುತ್ತಿದ್ದವು. ಒದ್ದೆಯಾಗಿರುವ ಕಾಲಿನಿಂದ ಅವಳ ಇಡೀ ಶರೀರ ತಣ್ಣಗಾಯಿತು.

ಈಗ ಸಮುದ್ರದ ಹೊರಮೈಯಿಂದ ಹೊಳೆಹೊಳೆಯುವ ಹಾದಿಯೊಂದು ಮೂಡಿಬಂದಿದೆ. ಪಶ್ಚಿಮ ದಿಕ್ಕಿನಿಂದ ಸೂರ್ಯನೆಡೆಗೆ ಸಾಗುತ್ತಿರುವ ಈ ಹಾದಿ ತನ್ನ ಶೋಭೆಯನ್ನು ಹೆಚ್ಚಿಸಿಕೊಳ್ಳುತ್ತಾ ಇದು ನೀರಿನದಲ್ಲ ಬಂಗಾರದ ದಾರಿಯೇ ಎನಿಸಿಬಿಡುವುದು. ಅದನ್ನು ಹತ್ತಿ ಹೋಗುವಂತಿದ್ದರೆ!

ಇದೇ ಭಾವನೆ ಬಾಲ್ಯದಲ್ಲಿ ಇರುತ್ತಿತ್ತು.

ಚಿಕ್ಕಂದಿನಲ್ಲಿ ನಾನು ಅಮ್ಮನೊಟ್ಟಿಗೆ ಬರುತ್ತಿದ್ದೆ. ಇಲ್ಲಿ ಒಬ್ಬಳೇ ಉಳಿಯಲು ಅಮ್ಮ ನನಗೆ ಬಿಡುತ್ತಿರಲಿಲ್ಲ. ನಾನು ಅವಳನ್ನು ಕೇಳಿದ್ದೆ, "ಅಪ್ಪ ಎಲ್ಲಿದ್ದಾರೆ?" ಅವಳ ಮುಖಭಾವ ಬದಲಾದುದು ಈಗಲೂ ನೆನಪಿದೆ.

– ಬೇಡ, ಅದನ್ನು ನೆನಪಿಸಿಕೊಳ್ಳುವುದು ಬೇಡ. ಪ್ರತಿಯೊಂದು ನೆನಪು, ಪ್ರತಿಯೊಂದು ಆಲೋಚನೆ ಒಂದೇ ಅನುಭವದ ಕಡೆಗೆ ಕೊಂಡೊಯ್ಯುತ್ತದೆ. ಆ ಅನುಭವ ನನ್ನ ಬದುಕಿಗೆ ಅಂಟಿಕೊಂಡಿರುವ ಶಾಪ. ನಾನು ಅದನ್ನು ಮರೆಯಬೇಕು.

ವಾಸಂತಿ ಹಿಂದೆ ತಿರುಗಿ ನೋಡಿದಳು. ಹೊತ್ತು ಕಳೆದಿರುವುದು ಅವಳ ಗಮನಕ್ಕೆ ಬಂತು. ಅವಿನಾಶ ಇನ್ನೂ ಬಂದಿಲ್ಲ ಎನ್ನುವುದು ತಟ್ಟನೆ ಹೊಳೆಯಿತು. ಯಾಕೆ ತಡವಾಗಿದೆ? ಬರಲಿಕ್ಕಿಲ್ಲವೇ?

ಅವಿನಾಶ ಎನ್ನುವಾಗ ಅವನ ಆ ಮಾತು ನೆನಪಿಗೆ ಬರುತ್ತದೆ–

"ನೀನು ಆ ಯಯಾತಿಯ ಇನ್ನೊಂದು ರೂಪ ಕಣೆ"

"ಹೇಗೆ?"

"ಹೇಗೆಂದರೆ ಯಯಾತಿಯ ಶರೀರ ಯೌವನದಲ್ಲಿಯೇ ಮುದಿಯಾಯಿತು. ನೀನೂ ಅಷ್ಟೇ, ನೋಡಲು ಮಾತ್ರ ತರುಣಿ. ಮನಸ್ಸು ಮುದಿಗಟ್ಟಿ ಹೋಗಿದೆ"

"ಹಾಂ! ನನ್ನ ಮೇಲೂ ಒಂದು ಶಾಪ ಇದೆ."

"ಶಾಪವೇ! ಏನದು?"

"ಮುದಿತನದ ಶಾಪ. ಮುದಿತನದಲ್ಲಿ ಬರೀ ಏಕಾಂಗಿತನವೇ ಇರುತ್ತದೆ ಎನ್ನುತ್ತಾರಲ್ಲ, ಅದು ನನಗೆ ಅನುಭವವಾಗುತ್ತದೆ.ಭಯಂಕರ ಅನುಭವ."

ಅವಿನಾಶ ದೊಡ್ಡದಾಗಿ ನಕ್ಕುಬಿಟ್ಟ.

ಇವತ್ತು ಅವನು ಯಾಕೆ ತಡಮಾಡುತ್ತಿದ್ದಾನೋ. ಯಾರು ಬಲ್ಲರು? ಅವನು ಬರುವ ಸಮಯ ಕಳೆದುಹೋಯಿತೆಂದು ಆತಂಕವಾಯಿತೇ? ವಾಸಂತಿ ತನ್ನಲ್ಲಿಯೇ ಪ್ರಶ್ನೆ ಹಾಕಿದಳು. ಆತಂಕವೇ? ನನಗೆ? ಯಾಕಾಗಿ? ಅವಿನಾಶ್ ನನಗೆ ಏನಾಗಬೇಕು. ಪ್ರೇಮಿ? ಛೇ! ಅಲ್ಲ! ಹಾಗಿದ್ದರೆ? ಗೆಳೆಯ? ಹೌದು, ಗೆಳೆಯ. ಸಾಧಾರಣ ಗೆಳೆಯನಲ್ಲ, ಆತ್ಮಸಂಗಾತಿ. ಆತ್ಮದ ಬೆಳಕು. ಹೀಗೆ ಪರಿಗಣಿಸುವುದಕ್ಕೆ ಕಾರಣವಿದೆ. ಅವಿನಾಶನ ಪರಿಚಯವಾಯಿತು. ಒಬ್ಬರು ಇನ್ನೊಬ್ಬರ ಬದುಕನ್ನು ಅರ್ಥಮಾಡಿಕೊಂಡೆವು. ಆಗಲೇ ನನ್ನ ಆತ್ಮ ಕಾವೇರಿದಂತಾದುದು. ಅದಕ್ಕಿಂತ ಮೊದಲು ನನ್ನ ಆತ್ಮ ಎಷ್ಟು ತಣ್ಣಗಿತ್ತು! ಅದು ಎಷ್ಟು ತಣ್ಣಗಿತ್ತೆಂದರೆ ನನಗೆ ಎಲ್ಲಾ ಮನುಷ್ಯ ಸಂಬಂಧಗಳಲ್ಲಿ ಒಂದು ವಿಚಿತ್ರ ಅನುಭವಾಗುತ್ತಿತ್ತು. ಯಾರು ಹುಟ್ಟಲಿ ಯಾರು ಸಾಯಲಿ ನನಗೆ ಏನೂ ಅನಿಸುತ್ತಿರಲಿಲ್ಲ. ಯಾರಿಗೆ ಏನೇ ಆದರೂ ನನ್ನ ಅನಾಸಕ್ತ ಮನಸ್ಸಿಗೆ ಬಾಧೆಯಾಗುತ್ತಿರಲಿಲ್ಲ. ಎಲ್ಲರೂ ಸುಮ್ಮನೆ ಗೋಳಿಡುತ್ತಿದ್ದಾರೆ ಎನ್ನುವ ಹಾಗೆ ತೋರುತ್ತಿತ್ತು. ನನ್ನ ದೃಷ್ಟಿಯಲ್ಲಿ ಯಾರಿಗೂ ಯಾವ ಮಹತ್ವವೂ ಇರಲಿಲ್ಲ.

ಈಗ ಹಿಂತಿರುಗಿ ನೋಡಿದಾಗ ವಾಸಂತಿಗೆ ಆಶ್ಚರ್ಯವಾಗುತ್ತದೆ. ನನ್ನ ಬದುಕಿನಲ್ಲಿ ಹೀಗೆ ಹೇಗೆ ನಡೆಯಿತು? ಗೊತ್ತಿಲ್ಲ, ಆದರೆ ಬಾಲ್ಯದಿಂದ– ಒಂದು ನೆನಪಿಗೆ ಬರುತ್ತದೆ– ಈ ಜಗತ್ತಿನಲ್ಲಿ ನನ್ನನ್ನು ಬಿಟ್ಟರೆ ಬೇರೆ ಯಾರೂ ಇಲ್ಲವೆಂಬ ಅನುಭವ ನನಗೆ ಬಾಲ್ಯದಿಂದಲೂ ಇತ್ತು. ಏಕಾಂಗಿತನದ ಅನುಭವ ಗಟ್ಟಿಯಾಗುತ್ತಾ ಹೋಯಿತು. ಆಗ ನನಗೆ ನಾಲ್ಕು ವರ್ಷವಿರಬೇಕು. ಅಂದಿನ ನೆನಪು ಸ್ಪಷ್ಟವಾಗಿ ಇದೆ. ಮೊದಲ ಅನುಭವ ಕೂಡಾ ಏಕಾಂಗಿತನದ್ದೇ ಆಗಿದೆ.

ನಾನು ಕೋಣೆಯೊಂದರಲ್ಲಿ ಕುಳಿತಿದ್ದೆ. ದೊಡ್ಡ ಕೋಣೆ. ಆ ಕೋಣೆಯ ಮೂಲೆಯಲ್ಲಿ ಕುಳಿತು ನಾನು ಏನು ಮಾಡುತ್ತಿದ್ದೆ? ಆ!

ಅಷ್ಟರಲ್ಲಿ ಅಮ್ಮನ ಮತ್ತು ಅಜ್ಜಿಯ ಮಾತು ಕೇಳಿಬರಲಾರಂಭಿಸಿತು. ಅವರು ನನ್ನ ತಂದೆಗೆ ಬೈಯ್ಯುತ್ತಿದ್ದರು. ಅವರು ಬೈಯ್ಯುತ್ತಿರುವುದು ನನ್ನ ತಂದೆಗೆ ಎನ್ನುವುದು ನನಗೆ ಹೇಗೆ ತಿಳಿಯಿತೋ ಗೊತ್ತಿಲ್ಲ. ಆದರೆ ಅದು ತಿಳಿದ ಸ್ವಲ್ಪ ಹೊತ್ತಿನಲ್ಲಿಯೇ ಅವರ ಮಾತು ಮುಗಿದು ಅಲ್ಲಿ ಮೌನ ಆವರಿಸಿತು.

ಆಗ ನಾನು ಒಂಟಿಯಾದೆನೆಂಬ ಭಾವನೆ ನನ್ನಲ್ಲಿ ಮೂಡಿತು. ಇದ್ದಕ್ಕಿದ್ದಂತೆ ಗೊಂದಲ ಉಂಟಾಯಿತು. ಈ ಜಗತ್ತಿನಲ್ಲಿ ಮನುಷ್ಯರ ಸತ್ವವೆನ್ನುವುದು ಇರುವುದೆಲ್ಲಿ?

ನನ್ನ ಅಮ್ಮ ಮತ್ತು ಅಜ್ಜಿಯ ನಡುವೆ ದೊಡ್ಡ ಧ್ವನಿಯ ಮಾತುಕತೆ ನಡೆದಿತ್ತಲ್ಲ, ಅದರ ನಂತರದ ಮೌನ ವಾತಾವರಣದಿಂದ ನನ್ನಲ್ಲಿ ಏಕಾಂಗಿತನದ ಭಾವನೆ ಹುಟ್ಟಿತು. ಇಲ್ಲದಿದ್ದರೆ ಇವತ್ತಿನ ನನ್ನ ಈ ದುಸ್ಥಿತಿ ಬದಲಾಗುವುದು ಸಾಧ್ಯವಿತ್ತೇ? ಯಾರಿಗ್ಗೊತ್ತು? ಆದರೆ ನನ್ನ ಜೀವಮಾನವಿಡೀ ಏಕಾಂಗಿತನ ಹೆಚ್ಚುತ್ತಾ ಹೋಗಿದೆ.

ಶಾಲೆಯಲ್ಲಿ ಕಲಿಯುವಾಗ ಟೀಚರ್ ಪ್ರಶ್ನೆ ನೀಡಿ ಪಕ್ಕದ ತರಗತಿಯ ಟೀಚರ್ ಜೊತೆ ಹರಟೆ ಹೊಡೆಯಲು ಹೋಗುತ್ತಿದ್ದರು. ಎಲ್ಲಾ ಮಕ್ಕಳು ಮೌನವಾಗಿ ಪ್ರಶ್ನೆ ಬಿಡಿಸುವ ಕಾರ್ಯದಲ್ಲಿ ತಲ್ಲೀನರಾಗಿ ಇರುತ್ತಿದ್ದರು. ಆಗ ಎಡ ದಿಕ್ಕಿನಿಂದ ನನ್ನ ವೈರಿ ಬಂದು ನನ್ನ ಆತ್ಮವನ್ನು ಪ್ರವೇಶಿಸುತ್ತಿದ್ದನು.

ಈಗ ನಾನೇ ಒಬ್ಬ ಟೀಚರ್ ಆಗಿದ್ದೇನೆ. ಮುಂದೆ ಇರುವ ಮಕ್ಕಳಿ
ಬಿಡಿಸಲು ಪ್ರಶ್ನೆಗಳನ್ನು ಹಾಕುತ್ತೇನೆ. ಆದರೆ ಪಕ್ಕದ ತರಗತಿಗೆ ಹೋಗು
ಬದಲು ಮಕ್ಕಳ ನಡುವೆಯೇ ನಿಲ್ಲುತ್ತೇನೆ. ಆದರೆ ನನ್ನ ಮನಸ್ಸಿಗೆ ಮಾ
ಹಿಂದಿನ ಮಸ್ಥಿತಿಯಿಂದಾಗಿ ಏನೂ ಮಾಡುವ ಹಾಗಿಲ್ಲ. ಬಯಲಿನಲ್ಲಿಯು
ನಾನು ಏಕಾಂಗಿ ಎಂಬ ಭಾವನೆ ಬರುತ್ತದೆ. ನನ್ನ ಸುತ್ತುಮುತ್ತಲಿನ ಜನ
ಮಾತುಕತೆ, ಅಳಿಸ್ತು ಎಲ್ಲವೂ ಇದ್ದರೂ, ನನಗೆ ಹತ್ತಿರ ಯಾರೂ ಇಲ್ಲ
ಹಾಗೆ. ಪರಿಚಿತರೆಲ್ಲರೂ ದೂರ ದೂರ ಇರುವ ಹಾಗೆ ಭಾವನೆ ಬರುತ್ತದ
ಅದೇ ನನ್ನ ಶಾಪ, ತನ್ನ ತೊಂದರೆ. ತನ್ನ ಮುಷ್ಟಿಯೊಳಗಿಂದ ಯಾರಿಗೂ
ಸ್ವತಂತ್ರವಾಗಲು ಬಿಡದಿರುವಂತಹ ಶತ್ರು.

ಆಗಾಗ ಕಣ್ಣು ತುಂಬಿ ಬರುತ್ತಿತ್ತು. ಅಳುವುದೂ ನಡೆಯುತ್ತಿತ್ತು. ಆದ
ಏನಾಯ್ತು? ನನ್ನ ಪರಿಸರವೇನೂ ಬದಲಾಗಲಿಲ್ಲ. ಯಾರಿಗೂ ನನ್ನನು
ಪರಿಚಯಿಸಿಕೊಳ್ಳುವುದು ಸಾಧ್ಯವಾಗಲಿಲ್ಲ. ಯಾವುದೇ ಸ್ನೇಹಿತರೊಂದಿ
ಮುಕ್ತವಾಗಿ ತಿರುಗಾಡಲು, ಮಾತನಾಡಲು ಸಾಧ್ಯವಾಗಲಿಲ್ಲ. ಇನ್ನು ಅವರ
ನನಗೆ ಸೇರುತ್ತಲೇ ಇರಲಿಲ್ಲ. ಪರಿಚಯವಿದ್ದ ಎಲ್ಲಾ ಸ್ನೇಹಿತರಲ್ಲಿ ಯಾವುದೋ
ಒಂದು ನ್ಯೂನತೆ ಕಂಡುಬರುತ್ತಿತ್ತು. ಎಲ್ಲರಿಗೂ ಉಡುಪಿನ ವಿಚಾರ, ಸಿನೆಮಾ
ವಿಚಾರ ಹೀಗೆ ಅರ್ಥವಿಲ್ಲದ ಚರ್ಚೆ ಮಾಡುವುದು ಬೇಕಿತ್ತು. ಜೀವನದ
ಗಂಭೀರ ಚಿಂತನೆ ಇದ್ದಂತಹ ಒಬ್ಬ ಸ್ನೇಹಿತ ಕೂಡಾ ಸಿಗಲಿಲ್ಲ. ನನಗಾದರೆ
ಅವರ ಬಾಲ್ಯವನ್ನು ನೋಡಿ ಮತ್ತು ಕೇಳಿ ಬೋರೆನಿಸುತ್ತಿತ್ತು. ಹೊರಗಿನಿಂದ
ನಾನು ಗಂಭೀರವಾಗಿದ್ದೇನೆಯೇ?

ಒಮ್ಮೆ ಅವಿನಾಶ ಹೇಳಿದ್ದು ವಾಸಂತಿಗೆ ನೆನಪಿಗೆ ಬಂತು– "ನೀನು
ಅಗತ್ಯಕ್ಕಿಂತ ಹೆಚ್ಚು ಗಂಭೀರವಾಗಿರುತ್ತಿ. ಆ ದೃಷ್ಟಿಯಿಂದ ನಾವು ಬದುಕನ್ನು
ನೋಡುವುದು ಸರಿಯಲ್ಲ. ನಮಗೆ ಬದುಕಿನಲ್ಲಿ ಗಾಂಭೀರ್ಯ ಮತ್ತು ಉಲ್ಲಾಸ
ಎರಡೂ ಬೇಕು. ಆದರೆ ಅದರ ಅಗತ್ಯ ಮಿತಿಯಲ್ಲಿ ಇರಬೇಕು. ಅಮೃತ
ಹೆಚ್ಚಾದರೆ ವಿಷವಾಗುವ ಸಂಭವ ಇದೆಯಲ್ಲ?"

ಆದರೆ ಅವಿನಾಶ್, ನನ್ನ ಗಾಂಭೀರ್ಯ, ನನ್ನ ಏಕಾಂಗಿತನ, ಇವೆಲ್ಲಾ
ನಾನು ಮಾಡಿದ್ದು ಅಲ್ಲ. ಅವು ತನ್ನಷ್ಟಕ್ಕೆ ನನ್ನ ವ್ಯಕ್ತಿತ್ವದಲ್ಲಿ ಸೇರಿಕೊಂಡಿವೆ

ಅಥವಾ ನನ್ನ ಬದುಕಿನ ಯಾವುದೋ ಘಟನೆಯಿಂದ ನಾನು ಹೀಗೆ ಆಗಿರಬಹುದೇನೋ. ಆದರೆ ಎಲ್ಲಾ ತಪ್ಪು ನನ್ನದಲ್ಲ. ನನ್ನ ಬದುಕಿನದು, ನನ್ನ ವಾತಾವರಣದ ತಪ್ಪು ಕೂಡಾ ಇದೆ. ನನ್ನದಲ್ಲ, ಅವಿನಾಶ್ ನನ್ನದು ಅಲ್ಲ. ನನಗೆ ನನ್ನ ಏಕಾಂಗಿತನದಿಂದ ಬಿಡಿಸಿಕೊಂಡು ಸ್ವತಂತ್ರವಾಗಲು, ಮುಕ್ತವಾಗಿ ನಗಲು, ಮಾತನಾಡಲು ಎಷ್ಟು ಆಸೆ ಇದೆ ಗೊತ್ತೇನು? ಆದರೆ ನನ್ನ ಇಚ್ಛೆಯನ್ನು ಈಡೇರಿಸಿಕೊಳ್ಳುವುದಕ್ಕೆ ಯಾವುದೋ ಒಂದು ಅಡ್ಡಿ ಇದೆ. ಅದು ಯಾವ ರೀತಿಯ ಅಡ್ಡಿ ಎನ್ನುವುದನ್ನು ನಾನು ಬಲ್ಲೆ. ಆದರೆ ಅದನ್ನು ಮೀರುವುದು ಹೇಗೆ ಎನ್ನುವುದು ಮಾತ್ರ ನನಗೆ ಗೊತ್ತಿಲ್ಲ.

"ಮದುವೆಯಾಗಿ ಬಿಡು!" – ಈ ಗೊಂದಲದಿಂದ ಪಾರಾಗಲು ಅವಿನಾಶ್ ಸೂಚಿಸಿದ ದಾರಿ ಇದು. ಅದನ್ನು ಕೇಳಿದ ವಾಸಂತಿಗೆ ನಗಬೇಕು ಅನ್ನಿಸಿತು. ಇಪ್ಪತ್ತಾರು ವರ್ಷಗಳಲ್ಲಿ ನಾನು ಅನುಭವಿಸಿದ ಕಷ್ಟ ತಕ್ಷಣ ಇಲ್ಲವಾಗುವುದಂತೆ! ಇಷ್ಟು ವರ್ಷ ನನ್ನ ಸ್ನೇಹಿತರು ಮತ್ತು ಸ್ನೇಹಿತೆಯರಲ್ಲಿ ಯಾವುದನ್ನು ನಾನು ಹುಡುಕುತ್ತಿದ್ದೆನೋ ಅದು ಒಬ್ಬ ಅಪರಿಚಿತ ಮನುಷ್ಯ ಬಂದು ನನಗೆ ನೀಡುವನಂತೆ! ಇದೊಳ್ಳೇ ಜೋಕ್! ನನಗೆ ಗೊತ್ತು ಅವಿನಾಶ್, ನನ್ನ ಪೀಡೆಗೆ ಮದ್ದು ಮದುವೆಯಲ್ಲ. ಮದುವೆ ನನ್ನ ಕಷ್ಟಕ್ಕೆ ಮದ್ದಾಗಬಹುದೆಂದು ನಂಬಿಕೆಯೂ ಇಲ್ಲ. ಪ್ರೀತಿಸಿ ಮದುವೆಯಾದರೂ ನನ್ನ ತಾಯಿ-ತಂದೆ ಬೇರೆಯಾದರಲ್ಲ? ನಾನು ಗಾಳಿಗೆ ಬಿದ್ದೆನಲ್ಲ? ನನ್ನ ಬದುಕಿನಲ್ಲಿ ಅಪರಿಚಿತ ಪುರುಷನೊಬ್ಬನು ಸಹಭಾಗಿಯಾಗಿ ಬಂದಾಗ, ಅವನು ನನ್ನ ಆತ್ಮಸಂಗಾತಿಯಾಗಬಹುದೆಂದು ಹೇಳುವುದು ಹೇಗೆ? ನನಗಂತೂ ಸಾಧ್ಯವೇ ಇಲ್ಲ. ನನಗೆ ಅನ್ನಿಸುತ್ತದೆ, ಒಬ್ಬ ಅಪರಿಚಿತ ವ್ಯಕ್ತಿಯನ್ನು ವಿವಾಹವಾಗಿ ಅವನೊಂದಿಗೆ ಇರುವಾಗ, ಅವನ ಬಲಿಷ್ಠ ಭುಜದ ಮೇಲೆ ಒರಗಿಕೊಂಡಿರುವಾಗಲೂ ನನ್ನ ಆತ್ಮ ಒಂಟಿಯಾಗಿಯೇ ಉಳಿಯುವುದು. ರಕ್ಷಣೆಗಾಗಿ ಕೂಗಿಕೊಳ್ಳುವುದು. ನನಗೆ ಬೇಕಾಗಿರುವುದು ಪತಿಯಲ್ಲ. ನನ್ನ ಅಗತ್ಯ ದೇಹದ್ದಲ್ಲ, ಆತ್ಮದ್ದಾಗಿದೆ. ಅವಿನಾಶ್, ನಿನ್ನಂತಹ ಸ್ನೇಹಿತ ಯಾವಾಗಲು ನನ್ನ ಜೊತೆ ಇರುವಂತಾದರೆ!

ಅವಿನಾಶ್, ಇವತ್ತು ನೀನು ತಡ ಯಾಕೆ ಮಾಡುತ್ತಿ? ಬರಲಿಕ್ಕಿಲ್ಲವೇ ವಾಸಂತಿ ಚಡಪಡಿಸಿದಳು. ಅವನು ಬರದೇ ಇದ್ದರೆ ನನ್ನ ಸಂಜೆ ಅಪೂರ್ಣವಾಗುವುದು. ನನ್ನ ಏಕಾಂಗಿತನದ ನೋವು ತೀವ್ರಗೊಳ್ಳುವುದು. ನನಗೆ.. ನನಗೆ ಸಹಿಸಲಾಗುವುದಿಲ್ಲ..

ವಾಸಂತಿ ಕಣ್ಣೆತ್ತಿ ನೋಡಿದಳು. ಈಗ ಸೂರ್ಯ ಸಮುದ್ರದಲ್ಲಿ ಮುಳುಗಿಬಿಡುತ್ತಾನೆ. ಅವನ ರೂಪ ಮತ್ತು ರಂಗು ಬದಲಾಗುತ್ತದೆ. ನೋಡುನೋಡುತ್ತಿದ್ದಂತೆ ಸಮುದ್ರದಲ್ಲಿ ಮುಳುಗಿ ಇಲ್ಲವಾಗುತ್ತಾನೆ. ನಾನು ನನ್ನ ಮನೆಗೆ ಮರಳಿ ಹೋಗಿಬಿಡುವೆ. ಅಲ್ಲಿ ಈಗ ಕೋಣೆಯ ತುಂಬಾ ಕತ್ತಲೆ ಆವರಿಸಿರಬಹುದು. ನನ್ನ ಅಮ್ಮ ಯಾವುದೋ ಪುಸ್ತಕ ಹಿಡಿದು ಕುಳಿತಿರಬಹುದು. ನಾನು ಈಗ ಹೋದರೆ ಅವಳು ಬಂದು ಬಾಗಿಲು ತೆರೆಯುತ್ತಾಳೆ. ಆಮೇಲೆ ಮೌನವಾಗಿ ಮತ್ತೆ ಪುಸ್ತಕವನ್ನು ಕೈಗೆತ್ತಿಕೊಳ್ಳುತ್ತಾಳೆ. ಅಥವಾ ಅವಳು ಅಡುಗೆ ಮನೆಗೆ ಹೋಗಬಹುದು. ನಾನು ನನ್ನ ಕೋಣೆಯಲ್ಲಿ. ಯಾವಾಗಿನ ಹಾಗೆ ಏಕಾಂಗಿತನ ತನ್ನ ಬೆರಳನ್ನು ಸೆಟೆದುಕೊಂಡು ನನ್ನ ಆತ್ಮವನ್ನು ಹಿಡಿದು ನೋಯಿಸಬಹುದು ಮತ್ತು–

ಯಾರೋ ಹಿಂದಿನಿಂದ ಜೋರು ಜೋರಾಗಿ ನಗುತ್ತಾ ವಾಸಂತಿಯ ಆಲೋಚನೆಗೆ ತಡೆ ಹಾಕಿದರು. ಅವಳು ತಿರುಗಿ ನೋಡಿದಳು. ನಾಲ್ಕು ಮಂದಿ ತರುಣರು ಅವಳನ್ನು ನೋಡುತ್ತಾ ಏನೋ ಹೇಳಿ ಮುಂದೆ ನಡೆದರು. ಆಮೇಲೆ ತಿರುಗಿ ತಿರುಗಿ ನೋಡತೊಡಗಿದರು. ವಾಸಂತಿಗೆ ಅನ್ನಿಸಿತು– ನಾನು ಅಲೆಗಳತ್ತ ಕಾಲು ಚಾಚಿ ಕುಳಿತಿರುವೆನೆಂದು ಅವರು ಅಪಹಾಸ್ಯ ಮಾಡುತ್ತಿರಬಹುದೇ? ನನ್ನ ದೇಹದ ಬಿಸಿಯನ್ನು ತಣಿಸಲು ಹೀಗೆ ಕುಳಿತಿದ್ದೇನೆ ಎಂದು ಅವರು ಹೇಳಿಕೊಂಡಿರಬಹುದು. ಹೇಳಲಿ, ಪರವಾಗಿಲ್ಲ. ನನಗೇನು?

"ಏನಮ್ಮಾ, ಎಂದಿನಂತೆ ಹಗಲು ಕನಸು ಕಾಣುತ್ತಿರುವ ಹಾಗಿದೆ?"

ವಾಸಂತಿ ಬೆಚ್ಚಿಬಿದ್ದಳು. ಅರೆ, ಅವಿನಾಶ ಬಂದಿದ್ದಾನೆ! ಸ್ವಲ್ಪ ಸಮಯವಾದರೂ ಚಿಂತೆಯಿಂದ ಬಿಡಿಸಿ ಇರಬಹುದು.

"ಬಾ, ಕುತ್ಕೋ" ಅವಳು ಅವಿನಾಶನಿಗೆ ಹೇಳಿದಳು.

"ಇಲ್ಲಿ ಒದ್ದೆ ಮರಳಲ್ಲಿ ಕುಳಿತು ಬಟ್ಟೆ ಒದ್ದೆ ಮಾಡಿಕೊಳ್ಳುವುದೇ, ಹುಚ್ಚಿ!"

"ಅದಕ್ಕಲ್ಲ, ಪ್ರಪಂಚದೊಡನೆ ಒಂದಾಗಿ ಬಿಡುವುದಕ್ಕೆ. ಈ ಅಲೆಗಳು ಸಹಜವಾದುವು. ಇದೇ ಪ್ರಪಂಚದವು. ಈ ಅಲೆಗಳು ನನ್ನ ಕಾಲಿನ ಮೇಲೆ ಹಾದು ಹೋದಾಗ ನನಗೆ ಬ್ರಹ್ಮಾಂಡದ ಅರಿವು ಮೂಡುತ್ತದೆ. ನಾನು ಅದರ ಬಹಳ ಚಿಕ್ಕತುಣುಕು ಎಂಬ ಭಾವನೆ ಬರುತ್ತದೆ. ಅಗಾಧ ಬೆಳಕಿನ ಒಂದು ಕಿಡಿ ಎಂಬಂತೆ ಗೋಚರಿಸುತ್ತದೆ."

"ಹಾಗಿದ್ದರೆ, ಹೀಗೆ ಮಾಡು, ಈ ಸಮುದ್ರದಲ್ಲಿ ಹಾರಿಬಿಡು. ಆಮೇಲೆ ಈ ಪ್ರಪಂಚದಲ್ಲಿ ಒಂದಾಗಿಬಿಡಬಹುದಲ್ಲ."

"ನೀನು ಸುಮ್ಮನೆ ನನ್ನನ್ನು ಕೆರಳಿಸಬೇಡ. ನೀನು ಹೇಳಿದ ಹಾಗೆ, ಇದರಲ್ಲಿ ಹಾರಿ ಪ್ರಪಂಚದೊಂದಿಗೆ ಒಂದಾಗಿ ಬಿಡಬೇಕು ಎಂದು ಆಗಾಗ ನನಗೆ ಅನ್ನಿಸಿದ್ದು ಇದೆ."

ಅವಿನಾಶ ಗಂಭೀರನಾದ.

"ನನಗೆ ಗೊತ್ತೇ ಇದೆ ಬಿಡು. ನಿನ್ನ ಈ ಆಲೋಚನೆ ಸಹಜವಾಗಿಯೇ ಇದೆ. ಸತ್ಯ ಹೇಳಲಾ? ಕೆಟ್ಟದು ಒಳ್ಳೆಯದರಲ್ಲಿಯೇ ಬದುಕಿನ ಆಸಕ್ತಿ ಮತ್ತು ಮರಣದ ಆಗ್ರಹವಿದೆ. ಒಂದು ಇನ್ನೊಂದನ್ನು ನಾಶ ಮಾಡಲು ನೋಡುವುದು ಮತ್ತು ಈ ಎರಡು ವಿಧದ ವಿಕಾರ–ವಿಚಾರಗಳು ಒಂದೇ ರೀತಿಯಿಂದ ನಮ್ಮ ಒಳಗೆ ಗಟ್ಟಿಯಾಗಿ ನಿಂತು ಬಿಡುವುದು. ಏನು ಯೋಚಿಸುತ್ತಿದ್ದಿ? ನನ್ನ ಮಾತು ಕೇಳುತ್ತಿಲ್ಲವೇ"

"ಇಲ್ಲ, ಹೇಳು"

"ಬೇಡ, ಈ ವಿಚಾರ ನಾವು ಹೆಚ್ಚು ಮಾತನಾಡುವುದು ಬೇಡ."

ವಾಸಂತಿ ಮೌನವಾಗಿ ಕುಳಿತಳು. ಸ್ವಲ್ಪ ಹೊತ್ತು ಕಳೆದ ನಂತರ ಅವಳು ಕೇಳಿದಳು,

"ಇವತ್ತು ಬರುವುದಕ್ಕೆ ಯಾಕೆ ತಡವಾಯಿತು? ನೀನು ಬರುವುದಿಲ್ಲ ಎಂದುಕೊಂಡಿದ್ದೆ"

"ಅಂ, ಒಂದು ಸುದ್ದಿ ನಿನಗೆ ಹೇಳಬೇಕಾಗಿದೆ. ಗೊತ್ತಾ ನಿನಗೆ? ನಾನಿವತ್ತು ಒಂದು ಹುಡುಗಿಯನ್ನು ನೋಡಲು ಹೋಗಿದ್ದೆ"

"ಹೇಗಿದ್ದಾಳೆ, ಅವಳು?"

"ಚೆನ್ನಾಗಿದ್ದಾಳೆ, ಸುಂದರವಾಗಿದ್ದಾಳೆ"

"ಕಲಿತವಳೇ?"

"ಹೌದು"

"ಹಾಗಿದ್ದರೆ ನೀನು ಬೇಗನೆ ಮದುವೆಯಾಗುವವನಿದ್ದಿ?'

"ಅಂ?"

ನನ್ನ ನಷ್ಟವದು! ವಸಂತಿ ಯೋಚಿಸತೊಡಗಿದಳು. ಎಲ್ಲಕ್ಕಿಂತ ದೊಡ್ಡ ನಷ್ಟ ನನ್ನದು! ಇವತ್ತಿನವರೆಗೆ ನಾನು ಕತ್ತಲಲ್ಲಿ ಹುಡುಕಿದ ಒಂದು ಜ್ಯೋತಿಯ ಕಡೆಗೆ ಹೋಗುತ್ತಿದ್ದೆ. ಅದರ ಹತ್ತಿರ ಹೋಗುವಷ್ಟರಲ್ಲಿ ಅದು ನಂದಿಬಿಡುತ್ತಿತ್ತು. ಈಗ–

"ಕತ್ತಲಾಗುತ್ತಿದೆ," ಅವಿನಾಶ ಹೇಳಿದ, "ನೀನು ಮನೆಗೆ ಹೋಗುವುದಿಲ್ಲವೇನು?"

"ನನ್ನ ಮನೆ ಇಲ್ಲೇ ಇದೆಯಲ್ಲ? ಅಲ್ಲಿ ಹೋಗುವುದು, ಇಲ್ಲಿ ಕುಳಿತುಕೊಳ್ಳುವುದು ಎಲ್ಲಾ ಒಂದೇ"

"ನಾನು ಹೋಗಲಾ? ನಾಳೆ ಸಂಜೆ ಸಿಗೋಣ"

"ಹುಂ"

ಅವನು ದೃಷ್ಟಿಯಿಂದ ಮರೆಯಾಗುವವರೆಗೆ ನೋಡುತ್ತಾ ಇದ್ದಳು ವಾಸಂತಿ. ತಾನು ಅವನಿಗೆ ಅಭಿನಂದನೆ ಸಲ್ಲಿಸಲಿಲ್ಲ ಎನ್ನುವುದು ಅವಳಿಗೆ ಆಮೇಲೆ ಗೊತ್ತಾಯಿತು!

ಅಲೆಯೊಂದು ಬಂದು ಅವಳ ಪಾದವನ್ನು ತೋಯಿಸಿತು. ಅಲೆಗಳು ಸೋಂಕಿ ಕಾಲುಗಳು ಸಾಕಷ್ಟು ತಣ್ಣಗಾಗಿವೆ. ಅವಳು ಪಾದವನ್ನು ಹಿಂತೆಗೆದು

ಕೊಂಡಳು. ಇವತ್ತಿನವರೆಗೆ ಉಂಟಾಗಿರುವ ನಷ್ಟದಲ್ಲಿ ಇದು ಎಲ್ಲದಕ್ಕಿಂತ ದೊಡ್ಡದು–ನನ್ನ ಹಣೆಬರಹ. ನನ್ನ ಬದುಕೆಂದರೆ ನಷ್ಟದ ಕತೆಯೇ ಆಗಿಬಿಟ್ಟಿದೆ.

ಅಳು..ಅತ್ತುಬಿಡು...ಆದರೆ ಅಳಲು ಆಗುತ್ತಿಲ್ಲ.

ವಾಸಂತಿಯ ಬೆರಳುಗಳು ಮರಳಿನಲ್ಲಿ ಚಲಿಸಿದವು. ಅಲ್ಲಿ ತನ್ನ ಹೆಸರು ಸ್ಪಷ್ಟವಾಗಿ ಮೂಡಿ ಬಂದದ್ದನ್ನು ನೋಡಿ ಅವಳಿಗೆ ಆಶ್ಚರ್ಯವಾಯಿತು. ನನ್ನ ಹೆಸರನ್ನು ನಾನು ಯಾಕಾಗಿ ಬರೆದೆ? ಹೀಗೊಂದು ಆಲೋಚನೆ ನನ್ನಲ್ಲಿ ಇರಲಿಲ್ಲವಲ್ಲಾ? ಬಾಲ್ಯದಲ್ಲಿ ಜೊತೆ ಯಾರಾದರೂ ಆಡಲು ಸಿಕ್ಕಿದರೆ ಅವಳು ಹೀಗೆ ಮಾಡುವುದಿತ್ತು. ಬೆಳೆದು ದೊಡ್ಡವಳಾಗುತ್ತಿದ್ದಂತೆ ಆ ಬಾಲ್ಯ ಕೂಡಾ ಮುಗಿದು ಹೋಯಿತು.

ವಾಸಂತಿ ನೋಡುತ್ತಿದ್ದಂತೆ ಮತ್ತೊಂದು ಅಲೆ ಸರ್ss ಎನ್ನುತ್ತಾ ಬಂದು ಮರಳಿನ ಮೇಲಿನ ಅಕ್ಷರಗಳ ಮೇಲೆ ಬಿತ್ತು. ನಂತರ ಆ ಹೆಸರು ಅಲ್ಲಿ ದೃಷ್ಟಿಗೆ ಬೀಳಲಿಲ್ಲ. ಅವಳಿಗೆ ತನ್ನ ಕುರಿತು ಅವಿಶ್ವಾಸ ಮೂಡಿತು– ಈ ರೀತಿಯ ಬದುಕು ನನ್ನದು! ಛೆ, ನನಗೆ ಇದು ಬೇಡ. ಈ ಜಗತ್ತಿನಲ್ಲಿ ನನ್ನ ಹಾಗೆ ಯಾರಾದರೂ ಇರಬಲ್ಲರೇ? ಈ ದುಃಖ ಮತ್ತು ಕಷ್ಟ ಅನುಭವಿಸಲಿಕ್ಕೆಂದೇ ಹುಟ್ಟಿಬಂದಿರುವುದು. ದರಿದ್ರದ ಬದುಕು.

ಅವಳ ಮನಸ್ಸಿನಲ್ಲಿ ಅವಜ್ಞೆ ತುಂಬಿತು. ಆ ಅವಜ್ಞೆಯಲ್ಲಿ ಇರುವಾಗಲೇ ಅವಳ ಬೆರಳು ಮರಳಿನ ಬಳಿಬಂದು ಹೆಸರನ್ನು ಬರೆಯಿತು. ಅವಳು ಅವಜ್ಞೆಯಲ್ಲಿ ಅದನ್ನು ಓದಿಕೊಂಡಳು– ಹುಂ! ವಾಸಂತಿ!

ಸರ್ರ್.. ಎನ್ನುವ ಸದ್ದಿನೊಂದಿಗೆ ಅಲೆ ಬಂದು ಹೆಸರನ್ನು ಅಳಿಸಿ ಹಾಕಿತು. ವಾಸಂತಿಯ ಅವಜ್ಞೆ ಮತ್ತು ನಿಶ್ಚಯ ಹೆಚ್ಚುತ್ತಾ ಹೋಯಿತು. ನಾನು ಯಾಕಾಗಿ ಜನ್ಮ ತಾಳಿದೆ? ಹೇಳು, ಯಾಕೆ? ಸುಮ್ಮನೆ ಕಷ್ಟ ಅನುಭವಿಸುವುದಕ್ಕೆ? ಯಾರ ಪ್ರೀತಿಯೂ ಇಲ್ಲದೆ, ಯಾರ ಪ್ರೇಮವೂ ಇಲ್ಲದೆ, ಸುಮ್ಮನೆ ಉಸಿರಾಡುತ್ತಾ ಎಲ್ಲರಿಂದಲೂ ದೂರವಾಗಿ, ಎಲ್ಲರನ್ನೂ ದೂರವಾಗಿಸಿಕೊಂಡು ಏಕಾಂಗಿತನದ ಪೆಟ್ಟು ತಿನ್ನುವುದಕ್ಕೇನು? ಇಲ್ಲವಾದರೆ

ನಾನು ಯಾಕಾಗಿ ಇಷ್ಟು ಕಷ್ಟ ಅನುಭವಿಸುತ್ತಿದ್ದೇನೆ? ವಾಸಂತಿಗೆ ಉತ್ತರ ಸಿಗಲಿಲ್ಲ. ಸುಮ್ಮನೆ ಅವಜ್ಞೆಯಲ್ಲಿ ಇದ್ದಂತೆ ಅವಳು ಮತ್ತೆ ಮರಳಿನಲ್ಲಿ ಹೆಸರು ಬರೆದಳು. ಅದರ ಸುತ್ತಲೂ ಗೋಡೆ ಕಟ್ಟಿದಳು. ಆಮೇಲೆ ತನ್ನೊಳಗೇ ಮಾತನಾಡಿಕೊಂಡಳು– "ವಾಸಂತೀ, ನೀನು ಬಂಧಿಯಾಗಿರುವೆ. ಏಕಾಂಗಿತನದಲ್ಲಿ ಬಂಧಿಯಾಗಿರುವೆ. ಹೊರಗೆ ಬರುವುದು ನಿನ್ನಿಂದ ಸಾಧ್ಯವಿಲ್ಲ"

ಸರ್ರ್... ಎನ್ನುತ್ತಾ ಅಲೆ ಬಂತು. ಹೆಸರು ಇರುವ ಮರಳನ್ನು ತಲುಪುವ ಮೊದಲೇ ಪೂ.. ದಿ.. ಹೇಳುತ್ತಾ ಬಿದ್ದುಹೋಯಿತು. ಅಲೆಯ ತೆಳು ನೀರು ಮುಂದೆ ಬಂತು. ಆದರೆ ಯಾರೋ ದಿಕ್ಕು ಬದಲಾಯಿಸಿದಂತೆ ಅದು ಬೇರೆಡೆಗೆ ಹೊರಳಿತು.

ಕಟ್ಟಿದ ಗೋಡೆಯ ಕೆಳಗೆ ವಾಸಂತಿಯ ಹೆಸರು ಉಳಿಯಿತು. ದಟ್ಟವಾಗುತ್ತಿರುವ ಕತ್ತಲೆಯಲ್ಲಿ ಅವಳು ಮೌನವಾಗಿ ಕುಳಿತಳು.



# ಗಾಯ

ವಿಚಿತ್ರ ಸದ್ದು. ಗ-ಗ-ಗ-ಗ ಅಲ್ಲ, ಹಾಗಲ್ಲ ಗಂ-ಗಂ-ಗಂ ಗಂ ಇಲ್ಲ, ಇದು ಬದಲಾಗಿ ಗಸೂ-ಗಸೂ-ಸೂ- ಸೂ..ss ಎಂದಾಗುತ್ತದೆ. ಅದೇನದು ಸದ್ದು?

ಕಣ್ಣು ತೆರೆದು ನೋಡಿದೆ.

ಮುಂದೆ ಬಿಳಿ ಗೋಡೆ. ಅದರ ಮೇಲೆ ನೆಟ್ಟಗೆ ನಿಂತು ಸೂ ಸೂss ಸದ್ದಿನೊಂದಿಗೆ ತಿರುಗುತ್ತಿರುವ ಫ್ಯಾನ್. ವಿಮಾನದ ಮುಸುಡಿಯಲ್ಲಿರುವ ಗಾಳಿಯಂತ್ರದ ಹಾಗೆ. ಆದರೆ ಫ್ಯಾನ್ ಯಾಕೆ ಗೋಡೆ ಮೇಲೆ ನಿಂತಿದೆ? ಕಣ್ಣರಳಿಸಿ ನೋಡಲು ಪ್ರಯತ್ನಿಸಿದೆ. ಆದರೆ ಕಣ್ಣಿನ ರೆಪ್ಪೆ ಭಾರವಾಗಿದೆ. ಕಣ್ಣು ಸರಿಯಾಗಿ ತೆರೆಯಲು ಆಗುತ್ತಿಲ್ಲ. ತಲೆಯೂ ಭಾರ. ಬೇಡವೇ ಬೇಡ. ನಾನು ಕಣ್ಣು ಮುಚ್ಚಿ ಸುಮ್ಮನೆ ಬಿದ್ದುಕೊಂಡೆ.

ಹೀಗೆ ಎಷ್ಟು ಹೊತ್ತು ಮಲಗಿಕೊಂಡಿದ್ದೆನೋ ತಿಳಿಯಲಿಲ್ಲ. ನಿಧಾನವಾಗಿ ಒಂದು ಅಸ್ಪಷ್ಟ ಅಸ್ವಸ್ಥತೆ ಅನುಭವಕ್ಕೆ ಬರತೊಡಗಿತು. ಎಲ್ಲಿಯೋ ಏನೋ ನಡೆಯುತ್ತಿರುವುದು ನನಗೆ ಕಾಣಿಸುತ್ತಿತ್ತು. ಆದರೆ ಅದು ಏನೆಂಬುದು ಮಾತ್ರ ತಿಳಿಯುತ್ತಿರಲಿಲ್ಲ. ಗಂಟಲು ಒಣಗುತ್ತಿದೆ ಎನ್ನುವುದು ಮಾತ್ರ ಗೊತ್ತಾಯಿತು. ನೀರು ಬೇಕು, ನೀರು..

"ನೀರು" ನಾನು ಕೇಳಿದೆ – "ನೀರು ಕೊಡಿ."

ನೀರಿಗಾಗಿ ಕಾದು ಕುಳಿತೆ. ನನ್ನಿಂದ ಬಾಯಾರಿಕೆ ಸಹಿಸುವುದು ಸಾಧ್ಯವಾಗಲಿಲ್ಲ. ನನ್ನ ಗಂಟಲು ಎಷ್ಟು ಒಣಗಿ ಹೋಗಿತ್ತೆಂದರೆ ತಕ್ಷಣ ನೀರು ಸಿಗದೇ ಹೋದಲ್ಲಿ ನಾನು ಸತ್ತು ಹೋಗಬಹುದೆಂದು ಕಂಡಿತು. ನನಗೆ ದೊಡ್ಡ ಚಿಂತೆಯೇ ಆಯಿತು. ನಾನು ಬೊಬ್ಬೆ ಹಾಕಿದೆ,

"ಅಮ್ಮಾ, ನೀರು ಕೊಡಮ್ಮಾ"

ನನಗೆ ಆಶ್ಚರ್ಯವೆನಿಸಿತು. ನನ್ನ ಧ್ವನಿ ನನಗೇ ಕೇಳಿಸುತ್ತಿಲ್ಲ! ನನ್ನ ಧ್ವನಿಗೆ ಏನಾಗಿದೆ? ಏನಾಗಿದೆ? ನೀರಿಗಾಗಿ ಬೊಬ್ಬೆ ಹೊಡೆದಾಗ ನನಗೆ

ಸಂಪೂರ್ಣ ಪ್ರಜ್ಞೆಯಂತೂ ಇತ್ತು. ಆದರೆ ಧ್ವನಿ ಯಾಕೆ ಹೊರಡಲಿಲ್ಲ? ನಂತರ ನಿಧಾನವಾಗಿ ತಿಳಿಯಿತು. ನನ್ನ ಬಾಯಲ್ಲಿ, ನನ್ನ ಗಂಟಲಲ್ಲಿ ಏನೋ ಸಿಕ್ಕಿಕೊಂಡಿದೆ. ನಾನು ಕೈಯಿಂದ ಮುಖವನ್ನು ಸವರಿದೆ. ನನ್ನ ಬೆರಳಿಗೆ ತೆಳ್ಳಗೆ ಬಳಕುತ್ತಿರುವ ಯಾವುದೋ ಒಂದು ಸೋಂಕಿದಂತಾಯಿತು. ಅದು ನನ್ನ ಮೂಗಿನಿಂದ ಒಳಗೆ ಹೋಗಿದೆ. ಹಾವಿನ ಮರಿ ಇರಬಹುದೆ? ನಾನು ಬೆಚ್ಚಿ ಬಿದ್ದು ಕಣ್ಣು ತೆರೆದೆ.

ಮತ್ತೆ ಅದೇ ಬಿಳಿ ಗೋಡೆ ಮತ್ತು ಅದರ ಮೇಲೆ ನೇರವಾಗಿ ನಿಂತು ತಿರುಗುತ್ತಿರುವ ಫ್ಯಾನ್ ಕಂಡಿತು. ಇದನ್ನು ಹಿಂದೆ ಎಲ್ಲೋ ನೋಡಿದ ನೆನಪಾಯಿತು. ಗೋಡೆ ಮತ್ತು ಫ್ಯಾನಿನ ವಿಚಿತ್ರತೆ. ಈಗ ನಿಧಾನವಾಗಿ ನನ್ನಲ್ಲಿ ತಿಳಿವಳಿಕೆ ಮೂಡಲಾರಂಭಿಸಿತು. ನಾನು ನೋಡುತ್ತಿರುವುದು ಗೋಡೆಯಲ್ಲ, ಅದು ಸೀಲಿಂಗ್. ಫ್ಯಾನ್ ಗೋಡೆಯ ಮೇಲೆ ನೆಟ್ಟಗೆ ನಿಂತಿಲ್ಲ, ಸೀಲಿಂಗ್‌ನಿಂದ ಕೆಳಗೆ ತೂಗಿಕೊಂಡಿದೆ.

ಅದು ತಿಳಿದ ನಂತರ ನನಗೆ ತುಂಬಾ ನಗು ಬಂತು. ಫ್ಯಾನ್, ಸೀಲಿಂಗ್, ಗೋಡೆಗಳು ಹೀಗೆ ಸುತ್ತಮುತ್ತ ಕಣ್ಣಾಡಿಸಿದಾಗ ನಾನು ಈ ಕೋಣೆಯ ಮಂಚದ ಮೇಲೆ ಹೊದಿಕೆ ಹೊದ್ದು ಮಲಗಿರುವುದು ಗೊತ್ತಾಯಿತು. ತಲೆಯೆತ್ತಿ ನೋಡಿದಾಗ ಪ್ಲಾಸ್ಟಿಕ್ ನಳಿಕೆಯೊಂದು ನನ್ನ ಕೈ ಮೇಲೆ ಇರುವುದು ಕಂಡಿತು. ನನ್ನ ಮೂಗಿನ ಒಳಗೆ ಹೋಗಿರುವ ನಳಿಕೆ ಇದೇ.

ಅಷ್ಟರಲ್ಲಿ ನನಗೆ ಬಾಯಾರಿಕೆ ಆಯಿತು. ಈಗ ನನ್ನ ಗಂಟಲು ಮಾತ್ರವಲ್ಲ, ಇಡೀ ಕೋಣೆಯೇ ರಸಹೀನವಾಗಿ ಒಣಗಿದ ಅನುಭವವಾಯಿತು. ಕ್ಷಣಕ್ಷಣಕ್ಕೂ ನನ್ನ ನೀರಡಿಕೆ ಹೆಚ್ಚುತ್ತಾ ಹೋಯಿತು. ಕೈಬೆರಳುಗಳನ್ನು ಕೂಡಾ ಗಟ್ಟಿಯಾಗಿ ಹಿಡಿದುಕೊಳ್ಳುವುದು ನನ್ನಿಂದ ಸಾಧ್ಯವಾಗದೇ ಹೋಯಿತು. ಮತ್ತೊಮ್ಮೆ ಸಾವಿನ ಸಾಕ್ಷಾತ್ಕಾರವಾಯಿತು. ಆ ಭಾವನೆಯಿಂದಾಗಿ ಇದ್ದಕ್ಕಿದ್ದಂತೆ ಭಯ ನನ್ನನ್ನು ಆವರಿಸಿಕೊಂಡಿತು. ಕಣ್ಣಿನಿಂದ ದುಃಖ ಹರಿದು ಬಂತು. ನಾನು ತಳಮಳಿಸಿದೆ. ಅದನ್ನು ಸಹಿಸುವುದು ಸಾಧ್ಯವಿಲ್ಲವೆಂದು ಕೊಂಡಾಗ ನಾನು ನನ್ನ ಇಡೀ ಅಸ್ತಿತ್ವವನ್ನೇ ಸಂಭಾಳಿಸಿಕೊಳ್ಳುತ್ತ ಬೊಬ್ಬೆ ಹಾಕತೊಡಗಿದೆ,

"ನೀರು ನೀರು. ಅಮ್ಮಾ ನೀರು ಕೊಡೆ"

ಬದುಕಿದೆ! ಯಾರೋ ಬರುತ್ತಿದ್ದಾರೆ. ಯಾರದು?

ಸುಂದರ ಮೊಗದ ಬಿಳಿ ಫ್ರಾಕಿನ ಹುಡುಗಿ.

"ಹಲೋ! ಹೇಗಿದ್ದಿಯಾ?"

ಅವಳು ನನ್ನ ಹತ್ತಿರ ಬಂದು ಹಣೆ ಮತ್ತು ತಲೆಯ ಮೇಲೆ ಕೈಯಾಡಿಸುತ್ತಿದ್ದಾಳೆ.

"ದಯವಿಟ್ಟು ನನಗೆ ನೀರು ಕೊಡು"

ಅವಳಿಗೆ ಸ್ಪಷ್ಟವಾಗಲಿಲ್ಲವೆಂದು ಕಾಣುತ್ತದೆ.

"ಆಂ?"

"ನೀರು"

ಅವಳಿಗೆ ಅರ್ಥವಾಗಲಿಲ್ಲವೇ? ನಾನು ನೀರು ಕುಡಿಯುವ ಸನ್ನೆ ಮಾಡಿದೆ. ಗೊತ್ತಾಯಿತೆಂದು ಕಾಣುತ್ತೆ-

"ನಿಲ್ಲು" ಅವಳು ನೀರಿನ ಪಾತ್ರೆ ಹಿಡಿದು ಬಂದಳು. ನಾನು ನೇರವಾಗಿ ಗುಟುಕರಿಸುತ್ತಾ ಕುಡಿಯಲೆಂದು ಅವಳ ಕೈಯಲ್ಲಿರುವ ಲೋಟಾ ಹಿಡಿದೆ. ಆದರೆ ಅವಳು ನನ್ನ ಮಾತು ಕೇಳಲಿಲ್ಲ. ನಿಧಾನವಾಗಿ ಒಂದೊಂದೇ ಹನಿ ನೀರು ಕುಡಿಸಲಾರಂಭಿಸಿದಳು. ನಾನು ಕಣ್ಣು ಮುಚ್ಚಿಕೊಂಡೆ.

ಹೀಗೆ ಎಷ್ಟು ಹೊತ್ತು ನೀರು ಕುಡಿತಾ ಇದ್ದೆ, ಎಷ್ಟು ನೀರು ಕುಡಿದೆ ಗೊತ್ತಾಗಲೇ ಇಲ್ಲ. ಆದರೆ ಆ ಹುಡುಗಿ, "ಇನ್ನೂ ಬೇಕೇನು?" ಎಂದು ಕೇಳಿದಾಗ ನಾನು ಬೇಡ'ವೆಂದು ಹೇಳಿದೆ.

ಈಗ ನನಗೆ ಸಮಾಧಾನವೆನಿಸಿತು. ಕಣ್ಣು ತೆರೆದು ಸುತ್ತಮುತ್ತ ನೋಡತೊಡಗಿದೆ. ನಾನು ಒಂದು ಪುಟ್ಟ ಕೋಣೆಯೊಳಗೆ ಮಂಚದ ಮೇಲೆ ಮಲಗಿರುವುದು ಗೊತ್ತಾಯಿತು. ಇನ್ನೂ ಒಂದು ವಿಚಾರ ನನ್ನ ಅರಿವಿಗೆ ಬಂತು. ನನ್ನ ಸಂಪೂರ್ಣ ಸ್ಥಿತಿ ಬಿಳಿ ಬಣ್ಣದ್ದಾಗಿದೆ. ಕೋಣೆಯ ಗೋಡೆ

ಮತ್ತು ಸೀಲಿಂಗ್ ಬಿಳಿಬಣ್ಣದ್ದು. ಮೇಲೆ ತಿರುಗುತ್ತಿರುವ ಫ್ಯಾನ್ ಕೂಡಾ ಬಿಳಿ. ನಾನು ಬಿಳಿ ಮಂಚದ ಮೇಲೆ ಬಿಳಿ ಹೊದಿಕೆ ಹೊದ್ದು ಮಲಗಿದ್ದೇನೆ. ನನ್ನ ಬಳಿ ಬಿಳಿ ಫ್ರಾಕಿನ ಹುಡುಗಿ ಕುಳಿತಿದ್ದಾಳೆ. ತಟ್ಟನೆ ನನಗೆ ಅನಿಸತೊಡಗಿತು, ನಾನು ಮಲಗಿರುವ ಈ ಕೋಣೆ ನನ್ನ ಮನೆಯ ಕೋಣೆಯಲ್ಲ. ಹಾಗಿದ್ದರೆ ನಾನು ಎಲ್ಲಿ ಮಲಗಿದ್ದೇನೆ? ಯಾವಾಗಿಂದ ಮಲಗಿದ್ದೇನೆ?

ಆ ಹುಡುಗಿ ನನ್ನಲ್ಲಿ ಕೇಳುತ್ತಿದ್ದಾಳೆ, "ಈಗ ಹೇಗೆ ಅನಿಸ್ತಿದೆ?"

ಹೇಗೆ ಅನಿಸ್ತಿದೆ ಎಂದರೆ? ನಾನು... ನಾನು ಎಲ್ಲಿ ಮಲಗಿದ್ದೇನೆ? ಯಾಕೆ? ಇಲ್ಲಿ ಹೇಗೆ ಬಂದು ಮುಟ್ಟಿದೆ? ಅವಳನ್ನೇ ಕೇಳೋಣ.

"ನಾನು..." ಇಲ್ಲ ಮಾತನಾಡಲು ಆಗುತ್ತಿಲ್ಲ. ಮೂಗಿನ ನಳಿಕೆಯಿಂದಾಗಿ ಸ್ಪಷ್ಟವಾಗಿ ಮಾತನಾಡಲು ಆಗುತ್ತಿಲ್ಲ. ನಾನು ನಳಿಕೆಯನ್ನು ಎಳೆದು ತೆಗೆಯುವ ಪ್ರಯತ್ನ ನಡೆಸಿದೆ. ಅವಳು ಬೆಚ್ಚಿ ಓಡಿ ಬಂದು ನನ್ನ ಕೈ ತಡೆದಳು.

"ಕೂಡದು, ಕೂಡದು. ಅದನ್ನು ಎಳೆಯಬೇಡ. ನಿನಗೆ ಆಕ್ಸಿಜನ್ ಕೊಡುವ ನಳಿಕೆ ಅದು"

ನನಗೆ ಅಳು ಬಂತು. ಅದು ಅವಳಿಗೆ ತಿಳಿಯಿತೆಂದು ಕಾಣುತ್ತೆ. ಅವಳು ಬಗ್ಗಿ ನಗುತ್ತಾ ಹೇಳಿದಳು, "ಯೋಚಿಸಬೇಡ, ಈಗ ಡಾಕ್ಟರ್ ಬರುವರಿದ್ದಾರೆ. ಅವರು ನಿನ್ನನ್ನು ಪರೀಕ್ಷೆ ಮಾಡ್ತಾರೆ, ಈ ನಳಿಕೆ ತೆಗೆದುಬಿಡ್ತಾರೆ, ಆಮೇಲೆ ನಿನಗೆ ಒಳ್ಳೆಯದೆನಿಸುತ್ತೆ, ಆಯ್ತಾ?"

ಡಾಕ್ಟರ್! ಹಾಗಾದರೆ ನಾನು ಇರುವುದು ಆಸ್ಪತ್ರೆಯಲ್ಲಿ! ಯಾಕೆ?

"ಈಗ ನಿನಗೆ ಹೇಗ ಅನ್ನಿಸುತ್ತೆ?" ಅವಳು ಕೇಳಿದಳು.

ಅಯ್ಯೋ ಎಷ್ಟು ಸಲ ಈ ಪ್ರಶ್ನೆ ಕೇಳುತ್ತಾಳಪ್ಪಾ!

ನಾನು ಕಣ್ಣು ಮುಚ್ಚಿ ಯೋಚಿಸತೊಡಗಿದೆ. ಈ ನಳಿಕೆಯಿಂದಾಗಿ ನನಗೆ ಮಾತನಾಡಲು ಆಗುತ್ತಿಲ್ಲ. ದೇಹದ ಶಕ್ತಿಯೆಲ್ಲಾ ಸೋರಿಹೋದ ಹಾಗೆ ಅನಿಸುತ್ತಿದೆ. ಒಳಗೆ ಸೊಂಟದ ಕಡೆ ಹೊಟ್ಟೆಯೊಳಗೆ, ಅದರಿಂದ ಕೆಳಗೆ ಬರೀ ನೋವೇ ತುಂಬಿಕೊಂಡಿದೆ. ಸೂಜಿಯಿಂದ ಚುಚ್ಚಿದ ಹಾಗೆ. ಇನ್ನೂ ಹಲವೆಡೆ ಅಸ್ವಸ್ಥತೆ ಕಾಣಿಸುತ್ತಿದೆ.

ನಾನು ಮಗ್ಗಲು ಬದಲಾಯಿಸಿ ಮಲಗಿದೆ. ಹಾಗೆ ಪಕ್ಕಕ್ಕೆ ಸರಿದು ಮಲಗುವಾಗ ನನ್ನ ಬೆನ್ನಿಗೆ ಫ್ಯಾನಿನ ತಣ್ಣಗಿನ ಗಾಳಿ ಸೋಂಕಿತು. ಆ ಗಾಳಿ ಬೆನ್ನನ್ನು ಸವರಿದಾಗ ಅಸಾಧಾರಣ ಅನುಭವವಾಗತೊಡಗಿತು. ನನ್ನ ಕೆಳಗಿದ್ದ ಮಂಚ ಜಾರಿ ಹೋಗುತ್ತಿರುವಂತೆ ಭಾಸವಾಗತೊಡಗಿತು. ಕಣ್ಣು ಮುಚ್ಚಿದರೂ ಇಡೀ ಪ್ರಪಂಚ ಸುತ್ತುತ್ತಿರುವಂತೆ ಕಂಡಿತು. ತಲೆ ಬಿಸಿಯಾಯಿತು. ನಾನು ಹೆದರಿಕೆಯಿಂದ ಮಂಚವನ್ನು ಗಟ್ಟಿಯಾಗಿ ಹಿಡಿದುಕೊಂಡೆ. ಆದರೆ ಅದರೊಟ್ಟಿಗೆ ನಾನು ಕೂಡಾ ಸುತ್ತುತ್ತಿದ್ದಂತೆ ಕಂಡಿತು. ಈ ತಿರುಗುವಿಕೆ ನಿಧಾನವಾಗಿ ಕಡಿಮೆಯಾಗುತ್ತಾ ಹೋಗಿ ನಂತರ ನಿಂತುಹೋಯಿತು.

ಮತ್ತೊಮ್ಮೆ ನನ್ನ ಬೆನ್ನ ಮೇಲೆ ತಣ್ಣಗಿನ ಗಾಳಿಯ ಸ್ಪರ್ಶದ ಅನುಭವವಾಯಿತು. ವಿಚಿತ್ರ ಇದೆಯಲ್ಲಾ ಎಂದುಕೊಂಡು ನನ್ನ ಉಡುಪು ಸರಿ ಪಡಿಸಲೆಂದು ಹೊದಿಕೆಯೊಳಗೆ ಕೈ ಹಾಕಿದೆ. ಭಯದಿಂದ ಮರಗಟ್ಟಿ ಹೋದೆ.

ಹೊದಿಕೆಯೊಳಗೆ ನಾನು ಸಂಪೂರ್ಣ ನಗ್ನಳಾಗಿದ್ದೆ. ನಾನು ನಗ್ನಳಾಗಿ! ನಗ್ನಳಾಗಿ ನಾನು ಹೇಗೆ?

ತಟ್ಟನೆ ನನಗೆ ನೆನಪಿಗೆ ಬಂತು–

ಅವರು ನನ್ನನ್ನು ನಗ್ನಳಾಗಿಸಿದರು. ಅವರು–

ದೇವರೇ, ಈಗ ನನಗೆ ಎಲ್ಲವೂ ನೆನಪಾಗುತ್ತಿದೆ...

ಸಂಜೆಯ ಹೊತ್ತು. ದಟ್ಟವಾಗಿ ಕವಿಯುತ್ತಿರುವ ಕತ್ತಲು. ನಾನು ಶಾಲೆ ಮತ್ತು ಟ್ಯೂಶನ್ ಮುಗಿಸಿ ಮನೆಗೆ ಹೋಗುತ್ತಿದ್ದೇನೆ. ಅದು ಜನರು ಹೆಚ್ಚು ಓಡಿಯಾಡದ ಕಿರುದಾರಿ. ನಡುವೆ ಅಂತರವಿರುವ ಮನೆಗಳು. ಕವಿದ ಮೌನ. ಅಲ್ಲಿ ಕೇಳುತ್ತಿರುವ ಸದ್ದೆಂದರೆ ನನ್ನ ಚಪ್ಪಲಿಯದು ಮಾತ್ರ.

ಅಷ್ಟರಲ್ಲಿ ಸೈಕಲ್ ಬೆಲ್ ಕೇಳಿಬರುತ್ತಿದೆ. ಕೆಲವು ಗಂಡಸರು ಮಾತನಾಡಿಕೊಳ್ಳುವ ಸದ್ದು. ಹಿಂದೆ ತಿರುಗಿ ನೋಡಿದಾಗ ಸೈಕಲ್ ಮೇಲೆ ನಾಲ್ಕು ಮಂದಿ. ನನ್ನ ಹತ್ತಿರವೇ ಬರುತ್ತಿದ್ದಾರೆ. ನನ್ನನ್ನು ನೋಡಿ ನಗುತ್ತಿದ್ದಾರೆ. 'ಹಾಯ್' ಒಬ್ಬನ ಅಭಿವಂದನ. ಇನ್ನೊಬ್ಬನ ಶಿಳ್ಳೆ. ನನ್ನ ಕಾಳಜಿಯಿಲ್ಲದವರಂತೆ

ಸೈಕಲ್ ಓಡಿಸುತ್ತಿದ್ದಾರೆ. ನಾನು ರಸ್ತೆಯ ಬದಿಗೆ ಸರಿದುಕೊಂಡೆ. "ಚೆನ್ನಾಗಿದ್ದಿಯಲ್ಲೇ?" ಅವರ ಧ್ವನಿ. ತಿರುಗಿ ತಿರುಗಿ ನನ್ನನ್ನು ನೋಡುತ್ತಾ ಮುಂದೆ ಹೋಗುತ್ತಿದ್ದಾರೆ.

ನನ್ನ ಮನಸ್ಸಿನಲ್ಲಿ ಕ್ರೋಧ ಹುಟ್ಟಿಕೊಳ್ಳುತ್ತದೆ. ಹಲ್ಲುಗಳು ಅದುರಲಾರಂಭಿಸುತ್ತವೆ. ಅವರನ್ನು ಹಿಡಿದು ಚಚ್ಚಿ ಸಾಯಿಸುವಷ್ಟು ಆಗ್ರಹ. ಅವರಿಗೆ ಹುಳುಗಳ ಜನ್ಮ ಸಿಗಲಿ.

ಹೀಗೆ ಸ್ವಲ್ಪ ಸಮಯ ಕಳೆಯುತ್ತದೆ. ಮುಂದಿನಿಂದ ಸೈಕಲ್ ಮತ್ತು ಗಂಡಸರು. ಅವರೇ. ಮತ್ತೆ ಬಂದಿದ್ದಾರೆ. ನನ್ನನ್ನು ನೋಡದೇ ಹೋಗುತ್ತಿದ್ದಾರೆ. ಸದ್ದಿಲ್ಲ. ನಾನು ಮುಂದೆ ಸಾಗುತ್ತೇನೆ.

ಅಷ್ಟರಲ್ಲಿ ಹಿಂದಿನಿಂದ ಯಾವುದೋ ಒಂದು ಕೈ ನನ್ನ ಭುಜದ ಮೇಲೆ ಬಂದು ಬೀಳುತ್ತದೆ. ನೋಡಿದರೆ ಮತ್ತೆ ಅವರೇ. ನಾಲ್ಕು ಮಂದಿ. ನನ್ನ ಹತ್ತಿರವೇ ಇದ್ದಾರೆ! ಅವರ ದೃಷ್ಟಿ ನನ್ನ ದೇಹದ ಮೇಲೆ. ಅಲ್ಲಿಂದ ಕೆಳಗೆ.

ಅಪಾಯದ ಸೂಚನೆ!

ನಾನು ಆ ಕೈಗಳಿಂದ ಬಿಡಿಸಿಕೊಳ್ಳಲು ನೋಡುತ್ತಿದ್ದೇನೆ. ಅವರು ನನ್ನನ್ನು ತಡೆಯುತ್ತಿದ್ದಾರೆ. ನನ್ನ ದೇಹ ಸ್ತಬ್ಧವಾಗುತ್ತಿದೆ. ನನ್ನ ಹೆದರಿಕೆ ಬೊಬ್ಬೆಯಾಗಿ ಹೊರಬರಲು ಪ್ರಯತ್ನಿಸುತ್ತಿದೆ– ನನ್ನನ್ನು ಬಿಟ್ಟುಬಿಡಿ, ನನ್ನನ್ನು ಬಿಟ್ಟುಬಿಡಿ. ಅವರ ಕೈಗಳಿಂದ ನನ್ನ ಬಾಯಿ ಮುಚ್ಚಿಕೊಳ್ಳುತ್ತದೆ. ನನ್ನ ಬಾಯಿಗೆ ಅವರು ಬಟ್ಟೆ ತುರುಕುತ್ತಾರೆ. ನನ್ನ ಹೃದಯ ವೇಗವಾಗಿ ಬಡಿದುಕೊಳ್ಳುತ್ತದೆ. ಹೃದಯದ ಸ್ಥಾನದಲ್ಲಿ ಚಿಟ್ಟೆಗಳು ಹಾರತೊಡಗಿವೆ. ನಾನು ಥರಥರನೆ ನಡುಗುತ್ತಿದ್ದೇನೆ.

ಅವರು ನನ್ನ ಕೈಕಾಲು ಕಟ್ಟಿ ಹಾಕುತ್ತಾರೆ. ನಂತರ ರಸ್ತೆಯ ಪಕ್ಕದಲ್ಲಿರುವ ತೋಟಕ್ಕೆ ಕರೆದೊಯ್ಯುತ್ತಾರೆ. ನನ್ನ ಬಟ್ಟೆ ಹಿಡಿದು ಎಳೆಯುತ್ತಾರೆ. ಬೇಡ ಬೇಡ ಬೇಡ. ನನ್ನನ್ನು ಬಿಟ್ಟುಬಿಡಿ. ನನ್ನನ್ನು ಬಿಟ್ಟುಬಿಡಿ. ಧ್ವನಿ ಹೊರಡುತ್ತಿಲ್ಲ. ಹೀಗಾಗಿ ನನ್ನ ಇಡೀ ದೇಹ ಪ್ರತಿರೋಧಿಸುತ್ತಿದೆ.

"ಸುಮ್ಮನೆ ಬಿದ್ಕೋ!, ಆಂ!"

ನಾನು ಒದ್ದಾಡುತ್ತಿದ್ದೇನೆ.

"ಏ ಹುಡುಗೀ ಅಲುಗಾಡಬೇಡ, ಸುಮ್ಮನೆ ಮಲಗು." ಹೆಣ್ಣಿನ ಧ್ವನಿ. ಹೆಣ್ಣಿನದೇ? ಹೌದು ನಾನು ಕೇಳಿದ್ದು ಹೆಣ್ಣಿನ ಧ್ವನಿಯನ್ನೇ. ಹಾಗಿದ್ದರೆ ಅವರೇನಾದರು? ಎಲ್ಲಿಗೆ ಹೋದರು? ಬಿಳಿ ಫ್ರಾಕಿನ ಆ ಹುಡುಗಿ ನಿಂತಿದ್ದಾಳೆ. ನನ್ನ ಮೈದಡವುತ್ತಿದ್ದಾಳೆ.

ನಾನು ಸುಮ್ಮನೆ ಮಲಗಿದೆ. ಸ್ವಲ್ಪ ಸಮಯ ಕಳೆಯಿತು. ಆಮೇಲೆ ಹೊದಿಕೆಯೊಳಗೆ ಕೈಯಾಡಿಸಿ ನೋಡಿದೆ. ಒಂದು..ಎರಡು.. ಮೂರು..ಎಂಟು... ಎಂಟು ಕಡೆಗಳಲ್ಲಿ ಹತ್ತಿ ಇಟ್ಟು ಬ್ಯಾಂಡೇಜ್ ಮಾಡಿದ್ದಾರೆ. ಎಂಟು ಕಡೆಗಳಲ್ಲಿ ಗಾಯವಾಗಿದೆ. ನನಗೇನಾಗಿದೆ? ನಾನು ಏನು ಮಾಡಿದೆನೆಂದು ಹೀಗಾಯಿತು? ನಾನು ಮಾಡಿರುವುದಾದರೂ ಏನು?

ನನ್ನ ತಲೆಯ ಮೇಲೆ ಅವಳ ಬೆರಳುಗಳು. ಅದು ನನ್ನ ಕಣ್ಣಿನವರೆಗೆ ಬಂದು ತಲುಪುತ್ತದೆ. ನನ್ನನ್ನು ಸವರುತ್ತಿದೆ. ನನ್ನ ಕಣ್ಣು ಒದ್ದೆಯಾಗಿರುವುದು ನನಗೆ ತಿಳಿಯುತ್ತದೆ. ಅವಳ ಬೆರಳುಗಳು ಅಲುಗಾಡುತ್ತಿವೆ–

"ಅಳಬೇಡ. ಹಾಂ, ಅಳಬೇಡ. ನಿನಗೆ ಏನೂ ಆಗುವುದಿಲ್ಲ"

ನನಗೆ ಮಾತನಾಡಲು ಆಗುತ್ತಿಲ್ಲ.

ಕೋಣೆಯ ಬಾಗಿಲು ತೆರೆಯಿತು. ಒಬ್ಬ ಗಂಡಸು ಒಳಗೆ ಬಂದ. ಅವನು ಕೂಡಾ ಬಿಳಿ ಬಟ್ಟೆಯನ್ನೇ ಹಾಕಿಕೊಂಡಿದ್ದಾನೆ. ಅವನು ನನ್ನತ್ತ ಬರುತ್ತಿದ್ದಾನೆ. ನನ್ನ ಎದೆಬಡಿತ ಮತ್ತೆ ತೀವ್ರಗೊಳ್ಳುತ್ತಿದೆ. ಅವನು ಏನು ಮಾಡಲು ಬರುತ್ತಿದ್ದಾನೆ? ಅವನ ಮುಖದಲ್ಲಿ ನೋಯಿಸುವ ಇಚ್ಛೆ ಏನಾದರೂ ಇದೆಯಾ? ಅವನ ದೃಷ್ಟಿ ನನ್ನ ಇಡೀ ದೇಹದ ಮೇಲೆ ಹರಿಯಬಹುದೇ?

ಇಲ್ಲ, ಅವನ ಮುಖಭಾವ ಬೇರೆ ರೀತಿ ಇದೆ. ಅವನ ತುಟಿಯಂತೆ ಅವನ ಕಣ್ಣುಗಳು ಕೂಡಾ ನಗುತ್ತಿವೆ. ಅವನ ನೋಟ ನನ್ನ ಕಣ್ಣಿನ ಮೇಲೆ ಸ್ಥಿರಗೊಳ್ಳುತ್ತದೆ. ಆ ಹುಡುಗಿ ಎದ್ದು ನಿಂತು ಅವನಿಗೆ ಗೌರವ ತೋರಿಸುತ್ತಾಳೆ.

"ಹೇಗಿದ್ದಿ?"

ನಾನು..ನಾನು... ಸಾಯುತ್ತಿದ್ದೇನೆ.

"ನೀನು ಮಾತನಾಡುವುದಿಲ್ಲವೇನು? ಇರಲಿ, ಇರಲಿ. ನಿನಗೆ ಹೃದಯ ಇದೆಯೋ ಇಲ್ಲವೋ ನೋಡಿ ಬಿಡ್ತೀನಿ"

ಮಾತು ಆಡುತ್ತಿಲ್ಲ? ಮಾತನಾಡಲು ಆಗುತ್ತಿಲ್ಲ, ಡಾಕ್ಟರ್!

ಆತ ಬಿಳಿ ಕೋಟಿನಿಂದ ಸ್ಟೆತಸ್ಕೋಪ್ ತೆಗೆದು ಕಿವಿಗೆ ಹಚ್ಚಿ ನನ್ನ ಎದೆಯ ಬಳಿ ತರುತ್ತಾನೆ.

ಬೇಡ ಬೇಡ..

ಅವರ ಕೈಗಳು ಕೂಡಾ ಹೀಗೇ ಮುಂದುವರಿದಿದ್ದವು. ಅವರಿಂದಾಗಿ ನನ್ನ ದೇಹ ಎಷ್ಟು ನೋವನ್ನು ಅನುಭವಿಸಿತೆಂದರೆ ನನ್ನ ಆಕ್ರೋಶ ಮೇಲೆದ್ದು ಮುಗಿಲು ಮುಟ್ಟುವಷ್ಟಾಯಿತು. ಆದರೆ ಅದು ಯಾರ ಕಿವಿಯನ್ನೂ ತಲುಪಲಿಲ್ಲ. ನನ್ನ ಕೂಗು ಬಾಯಿಯಲ್ಲಿದ್ದ ಬಟ್ಟೆಯ ಕೆಳಗೆ ಅಡಗಿಕೊಂಡಿತು. ನನ್ನ ಬಟ್ಟೆ ಒಂದೊಂದಾಗಿ ಕಳಚಿಕೊಳ್ಳುತ್ತವೆ. ನನ್ನ ದೇಹವನ್ನು ಮರಳು ಮತ್ತು ಕಲ್ಲುಗಳು ಚುಚ್ಚುತ್ತಿವೆ. ದಡಬಡಿಸುತ್ತಿರುವ ನನ್ನ ದೇಹಕ್ಕೆ ಅವರ ಉಗುರು ತಾಗಿ ಅದು ಉರಿಯತೊಡಗಿದೆ.

ನನಗೆ ಅಲುಗಾಡಲು ಕೂಡಾ ಆಗುತ್ತಿಲ್ಲ. ನನ್ನ ಮತ್ತು ಕತ್ತಲೆ ತುಂಬಿದ ಆಗಸದ ನಡುವೆ ಅವರ ದೇಹ ಅಡ್ಡಿ ಬರುತ್ತದೆ. ಮುಗಿಲ ನಕ್ಷತ್ರದ ಸ್ಥಾನದಲ್ಲಿ ಈ ಕ್ರೂರ ಪಶುಗಳ ಹೊಳೆವ ಕಣ್ಣುಗಳು ಕಾಣಿಸುತ್ತದೆ. ಆ ಕಣ್ಣುಗಳು ನನ್ನನ್ನು ಗೇಲಿ ಮಾಡುತ್ತಿವೆ. ಅದರಲ್ಲಿ ಒಬ್ಬ ನಿರ್ದಯಿ ಇದ್ದಾನೆ. ಹಸಿದ ಪ್ರಾಣಿಯ ಹಾಗಿನವ ಇದ್ದಾನೆ. ಆ ಪ್ರಾಣಿ ಖಂಡಿತವಾಗಿಯೂ ನನ್ನನ್ನು ನುಂಗಿ ಬಿಡುತ್ತಾನೆ. ನನ್ನ ಲಜ್ಜೆ ನೋಡಿ ಅವರು ಗೇಲಿ ಮಾಡುತ್ತಾರೆ. ನಾನು ಉರಿಯುತ್ತಿದ್ದೇನೆ. ನನಗೆ ದೊಡ್ಡದಾಗಿ ಕೂಗಿ ಈ ಪ್ರಪಂಚವನ್ನು ಸೀಳಿ ಹಾಕಬೇಕೆನಿಸುತ್ತದೆ. ಆದರೆ ನನ್ನ ಅಳುವಿಗೆ ಧ್ವನಿ ಸಿಗುವುದಿಲ್ಲ. ನನಗೆ ಅಲುಗಾಡಲು ಕೂಡಾ ಆಗುತ್ತಿಲ್ಲ. ನಾನು ನನ್ನೊಳಗೆ ಇರುತ್ತೇನೆ. ನೋವಿನ ಪರ್ವತವನ್ನೇ ಅನುಭವಿಸುತ್ತೇನೆ.

ಒಬ್ಬ

....

ಇನ್ನೊಬ್ಬ

.....

ಮತ್ತೊಬ್ಬ

ಅವರು ಆಕಾಶ ಮತ್ತು ನನ್ನ ನಡುವೆ ಬಂದು ತಮ್ಮ ಹೊಳೆವ ಕ್ರೂರ ಕಣ್ಣುಗಳಿಂದ ನನ್ನನ್ನು ಅಣಕಿಸಿ, ನನ್ನನ್ನು ಉರಿಸಿ, ನನ್ನ ಅಸ್ತಿತ್ವವನ್ನೇ ನಾಶ ಮಾಡುತ್ತಿದ್ದಾರೆ. ನನ್ನ ಧೈರ್ಯ ಉಡುಗಿ ಹೋಗುತ್ತದೆ. ವಿಚಿತ್ರ ಅನುಭವವಾಗುತ್ತದೆ. ಈಗ ಉರಿ ಇಲ್ಲ. ಈಗ ಬೆನ್ನಿಗೆ ಮರಳು ಮತ್ತು ಕಲ್ಲು ಚುಚ್ಚುವುದಿಲ್ಲ. ಕೆಳಗಿದ್ದ ಭೂಮಿ ಜಾರಿ ಹೋಗುತ್ತಿದೆ. ನಾನು ಹತ್ತಿಯ ಹಾಗೆ ಮೇಲೇರುತ್ತಿದ್ದೇನೆಯೇ?

ಪ್ರಪಂಚವಿಡೀ ಆಕಾರ ಕಳೆದು ಕರಗಿ ಹೋಗುತ್ತಿದೆ. ಏನೂ ತಿಳಿಯುವುದಿಲ್ಲ. ಏನೂ ತಾಗುವುದಿಲ್ಲ. ಏನೂ ಕೇಳುವುದಿಲ್ಲ. ಏನೂ ಕಾಣುವುದಿಲ್ಲ. ಕತ್ತಲೆ.. ಬರೀ ಕತ್ತಲೆ..

ಈಗ ಕಣ್ಣು ತೆರೆದು ನೋಡಿದರೆ ನಾನು ಇಲ್ಲಿ, ಆಸ್ಪತ್ರೆಯಲ್ಲಿ ಇದ್ದೇನೆ. ಬಿಳಿ ಗೋಡೆಗಳು. ಬಿಳಿ ಮಂಚ. ಬಿಳಿ ಫ್ರಾಕಿನ ಆ ಹುಡುಗಿ. ಬಿಳಿ ಕೋಟು ಧರಿಸಿದ ಆ ಡಾಕ್ಟರ್..

ನನ್ನನ್ನು ಕರೆತಂದವರು ಯಾರು? ನನ್ನ ತಾಯಿಯೇ? ತಂದೆಯೇ? ತಮ್ಮನೇ? ಅಥವಾ ಆ ತೋಟದ ಧನಿಯೇ? ನನ್ನನ್ನು ಆ ಸ್ಥಿತಿಯಲ್ಲಿ ಎಷ್ಟು ಮಂದಿ ನೋಡಿರಬಹುದು. ನನ್ನ ನಗ್ನತೆಯನ್ನು ಎಷ್ಟು ಮಂದಿ ಕಂಡಿರಬಹುದು, ದೇವರೇ!

ನನ್ನನ್ನು ನೋಡಿ ನನ್ನ ತಾಯಿಗೆ, ತಂದೆಗೆ ಮತ್ತು ತಮ್ಮನಿಗೆ ಏನು ಅನ್ನಿಸಿರಬಹುದು? ನನ್ನ ದುರವಸ್ಥೆ ಕೇಳಿ ನನ್ನ ನೆರೆಮನೆಯವರಿಗೆ, ನನ್ನ ಶಾಲೆಯ ಸ್ನೇಹಿತೆಯರಿಗೆ ಹೇಗಾಗಿರಬಹುದು?

ಎಲ್ಲವನ್ನೂ ತಿಳಿದವರು ನನ್ನ ಹಿಂದೆ ಹೀಗೆ ಮಾತನಾಡುತ್ತಿರಬಹುದು–

– ನೀನು ಕೇಳಿದೆಯಾ?

– ಏನು?

– ನಮ್ಮ ಲಲಿತ ಇದ್ದಾಳಲ್ಲ?

– ಹೌದು.

– ಅವಳ ಮೇಲೆ ಅತ್ಯಾಚಾರವಾಯಿತಂತೆ!

– ಪಾಪ, ಅತ್ಯಾಚಾರ ಮಾಡಿದ್ದು ಯಾರಂತೆ?

– ಗೊತ್ತಿಲ್ಲ ಮಹರಾಯಿತಿ. ನಾಲ್ಕು ಮಂದಿ ಅವಳನ್ನು ಕರೆದುಕೊಂಡು ಹೋಗಿ..

ಅವರ ಮಾತಿನಲ್ಲಿ ಕಕ್ಕುಲತೆ ಇರಬಹುದು. ನಮಗೂ ಹೀಗೆ ಆಗಬಹುದೆಂಬ ಭಯ ಅವರ ಮನಸ್ಸನ್ನು ಕಾಡುತ್ತಿರಬಹುದು.

ಇನ್ನು ಅವರ ಮುಖವನ್ನು ನೋಡುವುದು ಹೇಗೆ? ಶಾಲೆಗೆ ಹೋಗುವುದು ಹೇಗೆ? ಮನೆಯ ಹೊರಗೆ ಯಾವ ಮುಖವಿಟ್ಟು ಹೋಗಲಿ? ದೇವರೇ, ಹೇಗೆ? ಸಾಧ್ಯವಿಲ್ಲ. ಸಾಧ್ಯವಿಲ್ಲ. ಸತ್ತು ಹೋದರೇ ಒಳ್ಳೆಯದು. ಸಾಯಲೇಬೇಕು.

ಆದರೆ ಹೇಗೆ? ಇಲ್ಲಿ ವಿಷವೇನಾದರೂ ದೊರೆಯಬಹುದೇ? ನಾನು ಸುತ್ತಲೂ ದೃಷ್ಟಿ ಹರಿಸಿದೆ. ನಳಿಕೆ– ಹೌದಲ್ಲ ನಳಿಕೆ ಇದೆ. ಅದನ್ನು ಕಿತ್ತು ತೆಗೆದುಬಿಡು. ನಾನು ನಳಿಕೆಯನ್ನು ಕಿತ್ತು ತೆಗೆಯಲು ಕೈ ಹಾಕಿದಾಗ ಆ ಹುಡುಗಿ ಬಂದು ನನ್ನನ್ನು ತಡೆದಳು. ಡಾಕ್ಟರನ್ನು ಕರೆದಳು.

"ಓಕೆ ಸಿಸ್ಟರ್, ಆ ನಳಿಕೆಯನ್ನು ತೆಗೆದು ಬಿಡು ನೋಡೋಣ."

ಅವಳು ನನ್ನ ಮಂಚದ ಬಳಿ ಬಗ್ಗಿಕೊಂಡು ಏನೋ ಮಾಡಿದಳು. ಆಮೇಲೆ ಎದ್ದು ನಿಂತು ಆ ನಳಿಕೆಯನ್ನು ಮೆಲ್ಲಗೆ ಎಳೆಯತೊಡಗಿದಳು. ನನಗೆ ಮೂಗಿನೊಳಗೆ ತುಂಬಾ ನೋವಾಯಿತು. ಅದಕ್ಕಿಂತ ಹೆಚ್ಚಾಗಿ

ಕಚಗುಳಿಯಾಯಿತು. ನಳಿಕೆಯನ್ನು ಹೊರಗೆ ಎಳೆದು ತೆಗೆದ ನಂತರ, ಇಷ್ಟು ಉದ್ದದ ನಳಿಕೆ ನನ್ನೊಳಗೆ ಸೇರಿಕೊಂಡಿತ್ತೇ ಎಂದುಕೊಂಡು ನನಗೆ ಆಶ್ಚರ್ಯವಾಯಿತು. ಆಗಲೇ ಸೀನು ಕೂಡಾ ಬಂತು.

ನನಗೆ ನೆನಪಾಯಿತು. ನಾನು ಸಾವಿಗಾಗಿ ತಯಾರಾಗಿ ನಿಂತಿದ್ದೇನೆ. ಈಗ ನನ್ನ ಮರಣದ ಸಮಯ ಬಂದಿದೆ. ಈಗ...

ಡಾಕ್ಟರ್ ನನ್ನಲ್ಲಿ ಕೇಳುತ್ತಿದ್ದಾರೆ–

"ನೋವಾಗುತ್ತಾ ಹುಡುಗಿ?"

ನನಗೆ ಸಾವು ಬೇಕು. ಆದರೆ ಎಲ್ಲಿದೆ ಸಾವು? ಆಕ್ಸಿಜನ್ ನೀಡುವ ನಳಿಕೆಯನ್ನು ಎಳೆದು ತೆಗೆದರೂ ನಾನಿನ್ನೂ ಸತ್ತಿಲ್ಲ. ನನಗೆ .....

ಯಾಕೆ?

"ಇಲ್ಲ? ಒಳ್ಳೇದು ಒಳ್ಳೇದು" ಡಾಕ್ಟರರ ಧ್ವನಿ. ಅವರು ಆ ಹುಡುಗಿಗೆ ಏನೋ ಹೇಳಿ, ಬರೆದು ಕೊಟ್ಟು ಹೊರಗೆ ಹೋದರು. ನಾನು ಅದೇ ರೀತಿ ಮಲಗಿಕೊಂಡೇ ಇದ್ದೆ. ನನ್ನೊಳಗೆ ಸಿಟ್ಟು, ನಿರುತ್ಸಾಹ ಮತ್ತು ರಾತ್ರಿಯ ಘಟನೆ ತುಂಬಿಕೊಂಡಿತ್ತು. ಆ ಭಯಾನಕ ಘಟನೆ ಮತ್ತೆ ಮತ್ತೆ ನೆನಪಿಗೆ ಬರುತ್ತಿತ್ತು. ತಕ್ಷಣ ನಾನು ಆ ಹುಡುಗಿಯಲ್ಲಿ ವಿಚಾರಿಸಿದೆ– 'ಇವತ್ತು ಯಾವ ದಿನ? ಈಗ ಗಂಟೆ ಎಷ್ಟಾಗಿದೆ?' ಅವಳ ಉತ್ತರ ಕೇಳಿ ನಾನು ಆಶ್ಚರ್ಯಚಕಿತಳಾದೆ. ಈಗ ಸಂಜೆಯಾಗಿದೆ! ನಿನ್ನೆಯ ಸಂಜೆಯಿಂದ ಇವತ್ತಿನ ಸಂಜೆಯವರೆಗಿನ ಇಪ್ಪತ್ನಾಲ್ಕು ಘಂಟೆ ನಾನು ಯಾವ ಜಗತ್ತಿನಲ್ಲಿ ಇದ್ದೆ? ಇನ್ನು ಇಲ್ಲಿಗೆ–

"ಸಿಸ್ಟರ್, ನನ್ನನ್ನು ಇಲ್ಲಿಗೆ ಮುಟ್ಟಿಸಿದವರು ಯಾರು? ನನ್ನ ತಾಯಿ ಅಥವಾ ನನ್ನ ತಂದೆ ಇರಬಹುದಲ್ಲ? ಅವರು ನನ್ನ ದಾರಿ.."

"ನಿನ್ನ ಅಮ್ಮ ಇಲ್ಲಿ ಹೊರಗೆ ಇದ್ದಾರೆ. ನಿನ್ನ ತಮ್ಮನೂ ಇದ್ದಾನೆ. ಇನ್ನು ಬೇಕಾದಷ್ಟು ಜನರು ಅಲ್ಲಿದ್ದಾರೆ. ಹೆದರಬೇಡ"

ಎಲ್ಲರೂ ಇಲ್ಲಿಯೇ ಇದ್ದಾರೆ! ದೇವರೇ, ಅವರು ದುಃಖದಲ್ಲಿ ಬಂಧಿಯಾಗಿ ಕುಳಿತಿರಬಹುದು. ಅವರಿಗೆ ನನ್ನ ಕುರಿತು ಏನು ಅನಿಸಬಹುದು?

"ನಿಲ್ಲು, ನಿನ್ನ ಅಮ್ಮನನ್ನು ಮತ್ತು ತಮ್ಮನನ್ನು ಒಳಗೆ ಕರೆಯುತ್ತೇನೆ. ನಿನ್ನೆಯಿಂದ ಅವರು ಅಲ್ಲಿಯೇ ಕೂತಿದ್ದಾರೆ"

– ಬೇಡ! ನಾನು ಅವರನ್ನು ಹೇಗೆ ಎದುರಿಸಲಿ? ಹೇಗೆ? ಆಲೋಚಿಸುವುದು ಕೂಡಾ ಸಾಧ್ಯವಿಲ್ಲ. ನನ್ನ ಗೌರವ.. ಕಳೆದುಕೊಂಡು...ಬೇಡ. ಸರಿಯಾಗಲಿಕ್ಕಿಲ್ಲ. ಬೇಡ ಸಿಸ್ಟರ್, ಬೇಡ. ಅವರನ್ನು ಕರೆಯುವುದು ಬೇಡ. ಆದರೆ ಅವಳು ಹೋಗಿಯೇ ಬಿಟ್ಟಳು.

ಈಗ ಏನು ಮಾಡಲಿ? ಎದ್ದು ಹೋಗಲೇ? ಹೋಗಿ ಅಡಗಿಕೊಳ್ಳಲೇ? ಬಾತ್‌ರೂಮಿಗೆ ಹೋದರೆ..ನಾನು ತಕ್ಷಣ ಏಳಲು ಪ್ರಯತ್ನಿಸಿದೆ. ಹೊಟ್ಟೆಯಲ್ಲಿ ತುಂಬಿಕೊಂಡಿದ್ದ ಸಂಕಟ ಹೆಚ್ಚಾಯಿತು. ಕೆಳಗಿದ್ದ ಹಾಸಿಗೆ ಜಾರತೊಡಗಿತು. ತಲೆ ಬಿಸಿಯಾಯಿತು. ಸುತ್ತಲೂ ಇರುವುದೆಲ್ಲಾ ಸುತ್ತಲಾರಂಭಿಸಿತು.

ನನ್ನ ತಲೆಯ ಹಾಗೆ ಇಡೀ ಪ್ರಪಂಚವೇ ಸುತ್ತುತ್ತಿರುವಾಗ ನನ್ನ ಎದೆಯ ಮೇಲಿದ್ದ ಹೊದಿಕೆ ಸೊಂಟದವರೆಗೆ ಜಾರಿ ನಾನು ತೆರೆದುಕೊಳ್ಳುವುದು ನನಗೆ ಕಂಡಿತು.

ಕೋಣೆಯ ಬಾಗಿಲು ತೆರೆದು ಆ ಹುಡುಗಿ ಮತ್ತು ಅವಳ ಹಿಂದೆ ನನ್ನ ತಾಯಿ ಒಳಗೆ ಬರುತ್ತಿರುವುದು ದೃಷ್ಟಿಗೆ ಬಿತ್ತು. ತಕ್ಷಣ ನಾನು ಹೊದಿಕೆಯನ್ನು ನನ್ನ ಮೇಲೆ ಎಳೆದುಕೊಂಡೆ. ಅವರಿಗೆ ಬೆನ್ನು ಹಾಕಿ ಮಲಗಿ ಕಣ್ಣನ್ನು ಬಲವಾಗಿ ಮುಚ್ಚಿಕೊಂಡೆ. ತುಟಿ ಕಚ್ಚಿದೆ. ಸೂಜಿ ಚುಚ್ಚಿದ ಬಲೂನಿನ ಹಾಗೆ ನನ್ನ ಕಣ್ಣಿನ ಕೊನೆಯಿಂದ ಒಳಗಿನ ದುಃಖ ಹರಿದು ಬಂತು. ಆತ್ಮದ ನಡುಕ ತುಟಿಯ ಮೇಲೆ ಕಾಣಿಸಿತು...



## Vishwa Konkani Sahitya Akademy

## Books Published by Konkani Bhas Ani Sanskriti Prathistan (R.)

| Sl.No. | Title | Price |
|---|---|---|
| 1 | Kaleidoscope (English)Articles of Jnana Pita Awarde Ravindra Kelekar Trans. By Vidya Pai | 200/= |
| 2 | Mahakavi Govinda Pai (Hindi) | 200/= |
| 3 | Mahakavi Govinda Pai (Konkani) | 200/= |
| 4 | Kamaladevi Chattopadhyay (Konkani) Life And Works, Written by Dr. Jyotsna Krishnananda Kamat | 200/= |
| 5 | 'Noopura" a collection of Konkani Poems of Poet Bakibab Borkar translated into Kannada by Smt. Shakuntala Kini | 100/= |
| 6 | Kannada –Konkani Ratnakosh | 500/= |
| 7 | Vishwa Konkani Parichaya Kosha Vol-1 | 200/ |
| 8 | The Kiln (English Novel) English Trans. of Konkani Novel 'Havthan' by Mahabaleshwar Sail Translation by Vidya Pai, Kolkata | 200/= |
| 9 | The "KABULIVALA" Konkani Translation of Rabindranath Tagore small stories - Konkani Translation by Smt. Jayashree Shanbhag. | 100/= |
| 10 | Choola (Malayalam) English Trans. Of Konkani Novel 'Havthan' by Mahabaleshwar Sail Malayalam Translation by Dr. L. Suneetha Bai | 200/= |
| 11 | 'Bolanthuru Krishna Prabhu" Kannada Written by Sri B. Madhukar Mallya | 50/= |
| 12 | 'TEMBARE" Kannada novel by Sri M Veerappa Moily, Konkani Trans. By Sri. Ramesh Lad | 150/= |
| 13 | 'ADHUNIKA KONKANI KATHEGALU" Translation of Konkani Short Stories, Kannada Trans. Ed. by Dr. Geetha Shenoy, Bangalore | 200/= |

## Vishwa Konkani BALASAHITYA Mala Books
## ( Konkani in Kannada Script)

| Sl.No. | Title | Price |
|---|---|---|
| 1 | Valmiki | 20/= |
| 2 | Vyasa | 20/= |
| 3 | Vishwamithra | 20/= |
| 4 | Parashurama | 20/= |
| 5 | Gandhiji | 20/= |
| 6 | Shenoi Goembab | 20/= |
| 7 | Ammembala Subbarao Pai | 20/= |
| 8 | Panje Mangesh Rao | 20/= |

## Vishwa Konkani BALASAHITYA Mala Books (Devanagary script)

| Sl.No. | Title | Price |
|---|---|---|
| 1 | Valmiki | 20/= |
| 2 | Vyasa | 20/= |
| 3 | Vishwamithra | 20/= |
| 4 | Parashurama | 20/= |
| 5 | Gandhiji | 20/= |
| 6 | Shenoi Goembab | 20/= |
| 7 | Ammembala Subbarao Pai | 20/= |
| 8 | Panje Mangesh Rao | 20/= |

## Vishwa Konkani BALASAHITYA Mala Books
## (Bi-lingual Books - Konkani and English)

| Sl.No. | Title | Price |
|---|---|---|
| 1 | **Tenali Raman** (Outwits the Thieves) | 35/= |
| 2 | **The Clever Son** (Tales From Jataka) | 35/= |
| 3 | **The Boy Who Was a Snake** (Tales from Panchatantra) | 35/= |
| 4 | **Cinderella** ( A Fairy Tale) | 35/= |
| 5 | **The Noble Elephant** (Tales From Hitopadesha ) | 35/= |
| 6 | **The Sparrows of Agra** (Tales of Akbar and Birbal) | 35/= |

| | | |
|---|---|---|
| 7 | **The Loyal Mongoose** (Tales from Panchatantra) | 35/= |
| 8 | **Ganesh** (A Traditional Tale) | 35/= |
| 9 | **The Blue Jackal**( Tales from Panchatantra) | 35/= |
| 10 | **The Wise Rat** (Tales From Hitopadesha ) | 35/= |
| 11 | **The Wise Old Bird** (Tales from Panchatantra) | 35/= |
| 12 | **A Tale of Three Fish** (Tales from Panchatantra) | 35/= |
| 13 | **The Ugly Duckling** (A Fairy Tale) | 35/= |
| 14 | **There is Strength in Numbers** ( Tales from Panchatantra) | 35/= |
| 15 | **Snow White and the Seven Dwarfs**( A Fairy Tale) | 35/= |
| 16 | **Never Trust a Stranger** (Tales from Panchatantra) | 35/= |
| 17 | **The Proud Crow** (Tales From Hitopadesha) | 35/= |
| 18 | **The Clever Moneylender**( An Indian Folk Tale) | 35/= |
| 19 | **The Devout Beggar** (An Indian Folk Tale) | 35/= |
| 20 | **Rapunzel** (A Fairy Tale) | 35/= |
| 21 | **Tenali Raman** (and the Learned Man) | 35/= |
| 22 | **The Rooster's Ploy** (An Indian Folk Tale) | 35/= |
| 23 | **Tenali Raman** (and the Proud King) | 35/= |
| 24 | **The Mice that Ate Iron** (Tales from Panchatantra) | 35/= |
| 25 | **The Problem of the Mango Tree** (Tales of Akbar and Birbal) | 35/= |
| 26 | **Jesus Christ** (A Traditional Tale) | 35/= |
| 27 | **Where is God?** (An Indian Folk Tale) | 35/= |
| 28 | **Tales Price of a Sweet Smell** | 35/= |
| 29 | **The Wicked Raven** (Tales From Hitopadesha) | 35/= |
| 30 | **Tenali Raman** (and the Proud Priest ) | 35/= |



*The above testimonium in Konkani Language, is published in "Hortus Indicus Malabaricus", a comprehensive treatise that deals with the medicinal properties of the flora in the Indian state Kerala. The book in Latin was conceived by Hendrik Van Rheede who served as a Governor of Dutch Malabar between 1670 and 1677. The testimonium certifies the authenticity of medicinal information recorded in 12 Volumes. It has been inscribed in Konkani Language, duly signed by Ranga Bhat, Vinayaka Pandit and Appu Bhat, three Konkani Physicians who were the prominent contributors to the stupendous work. Apart from Latin, Malayalam and Arabic, the plant names have also been recorded in Konkani Language in these volumes.*

# ಋತುಸಂಕ್ರಮಣ

## ಗೋಕುಲದಾಸ್ ಪ್ರಭು

ಕೇರಳ ರಾಜ್ಯದ ಕೊಚ್ಚಿಯವರು. ಇಂಗ್ಲಿಷ್ ಸ್ನಾತಕ ಪದವೀಧರರು. ವೃತ್ತಿಯಲ್ಲಿ ಬ್ಯಾಂಕ್ ಅಧಿಕಾರಿ. ಮೊದಲ ಪ್ರಕಟಣೆ ಪ್ರಥಿವ್ಯೆ ನಮಃ (1986) ಕಿರುಕಾದಂಬರಿ. ಅಂತರ ಆಯಾಮಿ(1991) ಕತಾಸಂಕಲನ. ಕೊಂಕಣಿ ಚಳವಳ್ ಆನಿ ಮಾಧವ ಮಂಜುನಾಥ ಶಾನಭಾಗ್(2005) ಸಂಪಾದಿತ ಕೃತಿ. ಚೌಕಿ(1997) ಮತ್ತು ಕಾಲ್ (2010)ಎಂ.ಟಿ.ವಿ. ನಾಯರ್ ಅವರ ಮಲೆಯಾಳಿ ಕಾದಂಬರಿಗಳ ಅನುವಾದ. ಸೂಫೀನ್ ಸಾಂಗಿಲಿ ಕಾಣಿ ಕೆ.ಆರ್. ರಾಮನ್‌ಉಣ್ಣಿಯವರ ಮಲೆಯಾಳಿ ಕಾದಂಬರಿ ಅನುವಾದ. ಅಖಿಲ ಭಾರತ ಕೊಂಕಣಿ ಪರಿಷತ್ತಿನ ಕಾರ್ಯಾಧ್ಯಕ್ಷರು ಮತ್ತು ವಿಶ್ವ ಕೊಂಕಣಿ ಕೇಂದ್ರದ ಟ್ರಸ್ಟಿಗಳಾಗಿದ್ದಾರೆ. ಕೊಂಕಣಿ ಕವಿತೆಗಳ ಋತು ದ್ವಿಮಾಸಿಕ ಪತ್ರಿಕೆಯ ಸಂಪಾದಕರು. ಕೇಂದ್ರ ಸಾಹಿತ್ಯ ಅಕಾದೆಮಿಯ ಕೊಂಕಣಿ ಸೃಜನಶೀಲ ಕೃತಿ ಪ್ರಶಸ್ತಿ(1994) ಮತ್ತು ಕೊಂಕಣಿ ಅನುವಾದ ಪ್ರಶಸ್ತಿ(2002)ಯನ್ನು ಪಡೆದಿದ್ದಾರೆ. ಸಣ್ಣಕತೆಗಳಿಗಾಗಿ ಕುಳಾಗರ್ ಬಹುಮಾನ(1981,1982). ಗದ್ಯ ಬರೆವಣಿಗೆಗಾಗಿ ಕೇರಳ ಕೊಂಕಣಿ ಅಕಾಡೆಮಿ ಬಹುಮಾನ (1982), ಕಾವ್ಯಕ್ಕಾಗಿ ಕೊಂಕಣ್ ಜನತಾ ಬಹುಮಾನ(1982), ಟಿಎಂಎ ಪೈ ಪ್ರತಿಷ್ಠಾನದ ಉತ್ತಮ ಕೊಂಕಣಿ ಪುಸ್ತಕ ಪ್ರಶಸ್ತಿ(1993), ಕುಳಾಗರ್ ಪ್ರಶಸ್ತಿ(2005), ಅನುವಾದಕ್ಕಾಗಿ ಗೋವೆಯ ಕೊಂಕಣಿ ಕಲಾ ಸಾಹಿತ್ಯ ಕೇಂದ್ರದ ಶ್ಯಾಮ್ ಆರ್.ಎಸ್. ಕಾಕೋಡ್ಕರ್ ಪ್ರಶಸ್ತಿ ಇತ್ಯಾದಿ ಇವರಿಗೆ ದೊರೆತಿದೆ.

## ಡಾ. ಗೀತಾ ಶೆಣೈ

ದಕ್ಷಿಣ ಕನ್ನಡ ಜಿಲ್ಲೆಯವರು. ಕನ್ನಡ ಸ್ನಾತಕ ಪದವಿ ಮತ್ತು ಪಿಹೆಚ್.ಡಿ ಪದವೀಧರರು. ಮಹಿಳಾ ಅಧ್ಯಯನ ಮತ್ತು ಸಂಶೋಧನೆ ಇವರ ಆಸಕ್ತಿ ಕ್ಷೇತ್ರಗಳು. ಇಂಗ್ಲಿಷ್ ಮತ್ತು ಕೊಂಕಣಿ ಸಾಹಿತ್ಯದ ಸೃಜನಶೀಲ ಮತ್ತು ಸೃಜನೇತರ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಅನೇಕ ಯೋಜನೆಗಳಲ್ಲಿ ಮತ್ತು ಕಾರ್ಯಾಗಾರಗಳಲ್ಲಿ ಭಾಗವಹಿಸಿ ಕೃತಿಗಳನ್ನು ಸಂಪಾದಿಸಿದ್ದಾರೆ. ಸದ್ಯ ವಿವಿಧ ಕ್ಷೇತ್ರಗಳ ಸಹಸ್ರಮಾನದ ಸಾಧಕಿಯರ ಕುರಿತು ಐದು ಸಂಪುಟಗಳನ್ನು ಪ್ರಕಟಿಸುವ ಕಾರ್ಯದಲ್ಲಿ ತೊಡಗಿಕೊಂಡಿದ್ದಾರೆ.

---

ಕೊಂಕಣಿ ಭಾಸ ಆನಿ ಸಂಸ್ಕೃತಿ ಪ್ರತಿಷ್ಠಾನ

ವಿಶ್ವ ಕೊಂಕಣಿ ಕೇಂದ್ರ, ಕೊಂಕಣ ಗಾಂವ್, ಶಕ್ತಿನಗರ ಮಂಗಳೂರು- 575016

ISBN 83-8258203-6

9 788382 582031 08

₹ 125